ಕರ್ನಾಟಕ ಸರ್ಕಾರ

ರಾಜ್ಯಶಾಸ್ತ್ರ ಪಠ್ಯಪುಸ್ತಕ

# ರಾಜ್ಯಶಾಸ್ತ್ರದ ಮೂಲ ಪರಿಕಲ್ಪನೆಗಳು

**ಎಂಟನೇ ತರಗತಿ**

**ವಿಶೇಷ ಚೇತನ ವಿದ್ಯಾರ್ಥಿಗಳಿಗಾಗಿ- 2016**

ಕರ್ನಾಟಕ ಪಠ್ಯಪುಸ್ತಕ ಸಂಘ (ರಿ)

100 ಅಡಿ ವರ್ತುಲ ರಸ್ತೆ,

ಬನಶಂಕರಿ 3 ನೇ ಹಂತ,

ಬೆಂಗಳೂರು- 560 085.

**ಮಿತ್ರ ಜ್ಯೋತಿ ಡಿಜಿಟಲ್ ಲೈಬ್ರರಿ**
**ಮಿತ್ರ ಜ್ಯೋತಿ**
ಸಿ. ಎ. ಸೈಟ್ ನಂ. ಪಿ- 22, 18 ನೇ ಅಡ್ಡರಸ್ತೆ, 31 ನೇ ಮುಖ್ಯರಸ್ತೆ,
ಸೆಕ್ಟರ್- 1, ನಿಫ್ಟ್ ನ ಹಿಂಭಾಗ, ಹೆಚ್. ಎಸ್. ಆರ್. ಲೇಔಟ್,
ಬೆಂಗಳೂರು- 560102
ದೂರವಾಣಿ ಸಂಖ್ಯೆ: 22587623/ 22587625
ಈ-ಮೇಲ್: mj.tblibrary@gmail.com
ವೆಬ್ ಸೈಟ್: www.mitrajyothi.org

ಓದಲು ಅಸಮರ್ಥರಾದವರಿಗಾಗಿ ಮಿತ್ರಜ್ಯೋತಿ ಸಂಸ್ಥೆಯಿಂದ ವಿಶೇಷವಾಗಿ ತಯಾರಿಸಲಾಗಿದೆ. ಮಿತ್ರಜ್ಯೋತಿಯ ವಿಳಾಸ: ಸಿ.ಎ. ಸೈಟ್ ನಂ. ಪಿ 22, 18 ನೇ ಅಡ್ಡರಸ್ತೆ, 31 ನೇ ಮುಖ್ಯರಸ್ತೆ, ಸೆಕ್ಟರ್ 1, ನಿಫ್ಟ್‌ನ ಹಿಂಭಾಗ, ಹೆಚ್.ಎಸ್.ಆರ್. ಲೇಔಟ್, ಬೆಂಗಳೂರು – 560 102. ದೂರವಾಣಿ ಸಂಖ್ಯೆ – 22587623/ 22587625 (ಭಾರತದ ಕೋಡ್: +91, ಬೆಂಗಳೂರಿನ ಕೋಡ್: 080). ಈ-ಮೇಲ್ ವಿಳಾಸ: mj.tblibrary@gmail.com; ವೆಬ್ಸೈಟ್: www.mitrajyothi.org

## ಮುನ್ನುಡಿ

ಪ್ರೌಢಶಾಲೆಯಲ್ಲಿ ಅಭ್ಯಾಸ ಮಾಡುತ್ತಿರುವ ವಿಶೇಷ ಚೇತನ ವಿದ್ಯಾರ್ಥಿಗಳಿಗಾಗಿ ಈ ಪಠ್ಯಪುಸ್ತಕವನ್ನು ಸಿದ್ಧಪಡಿಸಲಾಗಿದೆ. ವಿಜ್ಞಾನ ಮತ್ತು ಗಣಿತ ವಿಷಯಗಳಿಗೆ ಪರ್ಯಾಯವಾಗಿ ವಿದ್ಯಾರ್ಥಿಗಳು ಇಚ್ಛಿಸಿದಲ್ಲಿ ರಾಜ್ಯಶಾಸ್ತ್ರ, ಸಮಾಜಶಾಸ್ತ್ರ ಮತ್ತು ಅರ್ಥಶಾಸ್ತ್ರ ಈ ಮೂರು ವಿಷಯಗಳಲ್ಲಿ ಎರಡು ವಿಷಯಗಳನ್ನು ಆಯ್ಕೆ ಮಾಡಿಕೊಳ್ಳುವ ಅವಕಾಶವನ್ನು ನೀಡಲಾಗಿದೆ. ಇವುಗಳಲ್ಲಿ ರಾಜ್ಯಶಾಸ್ತ್ರ ಪಠ್ಯವಿಷಯವು ಒಂದಾಗಿದೆ. 2015 ನೇ ಸಾಲಿನಲ್ಲಿ ಸಿದ್ಧಪಡಿಸಿದ ಹತ್ತನೇ ತರಗತಿ ಪಠ್ಯಪುಸ್ತಕವು 'ನಮ್ಮ ಭಾರತ ಸಂವಿಧಾನ' ಎಂಬ ಶೀರ್ಷಿಕೆ ಅಡಿಯಲ್ಲಿ ಸಂವಿಧಾನದ ವಿವಿಧ ಮಜಲುಗಳನ್ನು ವಿದ್ಯಾರ್ಥಿಗಳು ಅರ್ಥೈಸಿಕೊಳ್ಳಲು ನೆರವಾಗಿದೆ ಹಾಗೂ ಒಂಬತ್ತನೇ ತರಗತಿಯಲ್ಲಿ 'ರಾಜಕೀಯ ಚಿಂತಕರು ಮತ್ತು ರಾಜಕೀಯ ಸಂಸ್ಥೆಗಳು' ಎಂಬ ವಿಷಯವನ್ನು ಪರಿಚಯಿಸಲಾಗಿದೆ. ಈಗ 2016 ನೇ ಸಾಲಿನ ಎಂಟನೇ ತರಗತಿಯ ರಾಜ್ಯಶಾಸ್ತ್ರದ ಪಠ್ಯಪುಸ್ತಕವು 'ರಾಜ್ಯಶಾಸ್ತ್ರದ ಮೂಲ ಪರಿಕಲ್ಪನೆಗಳು'ಎಂಬ ಶೀರ್ಷಿಕೆಯಡಿಯಲ್ಲಿ ಪ್ರಕಟವಾಗುತ್ತಿದೆ. ಇದು 2005 ರ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟಿನಡಿಯಲ್ಲಿ ಹಾಗೂ ಪಠ್ಯವಸ್ತುವಿಗೆ ಅನುಗುಣವಾಗಿ ರಚನೆಯಾಗಿದೆ. ಈ ಪಠ್ಯದಲ್ಲಿರುವ ಅಧ್ಯಾಯಗಳು ವಿದ್ಯಾರ್ಥಿಗಳಲ್ಲಿ ರಾಜ್ಯಶಾಸ್ತ್ರದ ಪರಿಕಲ್ಪನೆಗಳನ್ನು ಅರ್ಥಮಾಡಿಕೊಳ್ಳಲು ನೆರವಾಗಲಿವೆ.

ಹತ್ತು ಅಧ್ಯಾಯಗಳನ್ನೊಳಗೊಂಡ ಈ ಪಠ್ಯಪುಸ್ತಕದಲ್ಲಿ ವಿಷಯ ಮಂಡನೆಯನ್ನು ಸಂಕ್ಷಿಪ್ತವಾಗಿ, ಸರಳವಾಗಿ ನಿರೂಪಿಸಲಾಗಿದೆ. ಹಂತಹಂತವಾಗಿ ವಿದ್ಯಾರ್ಥಿಗಳ ಸ್ವಯಂ ಕಲಿಕೆಗೆ ಉತ್ತೇಜನ ನೀಡುವಂತೆ ಮತ್ತು ಅವರಲ್ಲಿ ಸ್ವಯಂಚಿಂತನೆ ಬೆಳಸಲು ಪ್ರೇರಕವಾಗುವಂತೆ ಪಠ್ಯಪುಸ್ತಕವನ್ನು ರಚಿಸಲಾಗಿದೆ. ಪ್ರತಿ ಅಧ್ಯಾಯದ ಕೊನೆಯಲ್ಲಿ ನೀಡಿರುವ ಅಭ್ಯಾಸಗಳು ವಿದ್ಯಾರ್ಥಿಗಳಲ್ಲಿ ಚರ್ಚೆ ಮತ್ತು ವಿಚಾರ ವಿನಿಮಯದಂತಹ ಚಟುವಟಿಕೆಗಳಲ್ಲಿ ಭಾಗವಹಿಸುವ ಅವಕಾಶವನ್ನು ಒದಗಿಸುತ್ತವೆ.

ಈ ಪಠ್ಯಪುಸ್ತಕವನ್ನು ಸಿದ್ಧಪಡಿಸುವಲ್ಲಿ ಸಹಕರಿಸಿದ ಪಠ್ಯಪುಸ್ತಕ ರಚನಾ ಸಮಿತಿಯ ಅಧ್ಯಕ್ಷರಿಗೆ, ಸದಸ್ಯರಿಗೆ, ಪರಿಶೀಲಕರಿಗೆ, ಪಠ್ಯಪುಸ್ತಕಗಳನ್ನು ಸುಂದರವಾಗಿ ಮುದ್ರಿಸಿದ ಮುದ್ರಕರಿಗೆ ಹಾಗೂ ಈ ಕಾರ್ಯದಲ್ಲಿ ಸಹಕರಿಸಿದ ಸಮಸ್ತರಿಗೂ ಕರ್ನಾಟಕ ಪಠ್ಯಪುಸ್ತಕ ಸಂಘದ ಪರವಾಗಿ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ. ವಿದ್ಯಾರ್ಥಿಗಳು ಪಠ್ಯಪುಸ್ತಕದ ಮೂಲಕ ಪ್ರೇರಣೆ ಪಡೆದು, ಸಾಮಾಜಿಕ ಪರಿಸರದ ಗುಣಾತ್ಮಕ ಮೌಲ್ಯಗಳನ್ನು ರೂಢಿಸಿಕೊಂಡು ಉತ್ತಮ ಪ್ರಜೆಗಳಾಗಿ ರೂಪುಗೊಳ್ಳಲೆಂದು ಕರ್ನಾಟಕ ಪಠ್ಯಪುಸ್ತಕ ಸಂಘವು ಆಶಿಸುತ್ತದೆ,

**ನಾಗೇಂದ್ರ ಕುಮಾರ್,** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ (ರಿ), ಬೆಂಗಳೂರು.

**ಡಾ. ಬರಗೂರು ರಾಮಚಂದ್ರಪ್ಪ,** ಅಧ್ಯಕ್ಷರು, ರಾಜ್ಯ ಪಠ್ಯಪುಸ್ತಕ ಪರಿಷ್ಕರಣ ಸಮಿತಿಗಳು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

## ಅಧ್ಯಕ್ಷರ ದಿಟ ನುಡಿ

ಅಂಧ ಮಕ್ಕಳು ಮತ್ತು ಕಲಿಕಾ ನ್ಯೂನತೆಯುಳ್ಳ ಮಕ್ಕಳು ಸಹ ಜೀವ ವೈವಿಧ್ಯತೆ ಮತ್ತು ಸಂಸ್ಕೃತಿಯ ಭಾಗವಾಗಿದ್ದಾರೆ. ಅವರನ್ನು ಆತ್ಮವಿಶ್ವಾಸಿಗರನ್ನಾಗಿ ಮತ್ತು ಸ್ವಾವಲಂಬಿಗಳನ್ನಾಗಿಸುವ ಶಕ್ತಿ ಶಿಕ್ಷಣಕ್ಕಿದೆ. ವಿಶೇಷ ಶಿಕ್ಷಣದಿಂದಲೇ ಲೂಯಿ ಬ್ರೈಲ್ ಮತ್ತು ಹೆಲೆನ್ ಕೆಲ್ಲರ್ ರಂತಹ ದೃಷ್ಟಿ ವಿಶ್ವಾಸಿಗರು ಸಹ ಮನುಕುಲದ ನಿರ್ಮಾತೃಗಳಾದ ಜ್ವಲಂತ ಉದಾಹರಣೆಗಳಿವೆ. ದೃಷ್ಟಿರಹಿತರ ವ್ಯಕ್ತಿಘನತೆಯನ್ನು ಎತ್ತಿ ಹಿಡಿಯುವ ದೃಷ್ಟಿಯಿಂದ ಅಂಧರೆನ್ನುವ ಬದಲು ದೃಷ್ಟಿವಿಶ್ವಾಸಿಗರೆಂದು ಹಾಗೂ ಕಲಿಕಾ ನ್ಯೂನತೆಯುಳ್ಳ ಮಕ್ಕಳ ಘನತೆಯನ್ನು ಎತ್ತಿಹಿಡಿದು ಅವರಲ್ಲಿಯೂ ಆತ್ಮ ವಿಶ್ವಾಸವನ್ನು ತುಂಬಲು ಅವರನ್ನು 'ಕಲಿಕಾಸಕ್ತರು' ಎಂದು ಸಂಭೋಧಿಸುವುದು ಸೂಕ್ತ. ಕರ್ನಾಟಕದಲ್ಲಿ ವಿಶೇಷ ಶಿಕ್ಷಣಕ್ಕೆ ನೂರಕ್ಕೂ ಅಧಿಕ ವರ್ಷಗಳ ಇತಿಹಾಸವಿದೆ. ವಿಶೇಷ ಶಿಕ್ಷಣದಿಂದ ಲಾಭ ಪಡೆದ ಅನೇಕರು ಸ್ವಯಂ ಪ್ರತಿಭೆ ಸಾಮರ್ಥ್ಯಗಳಿಂದ ಸಂಪದ್ಭರಿತ ವ್ಯಕ್ತಿಗಳಾಗಿ ಸಮಾಜಕ್ಕೆ ಪ್ರಯೋಜನಕಾರಿಯಾಗಿದ್ದಾರೆ. ವಿವಿಧ ಕ್ಷೇತ್ರಗಳಲ್ಲುಂಟಾದ ಮುನ್ನಡೆಯಿಂದಾಗಿ ಸಮಾಜ ವಿಜ್ಞಾನಗಳಲ್ಲಿಯೂ ಅಭೂತಪೂರ್ವ ಬದಲಾವಣೆಗಳುಂಟಾಗಿವೆ. ಕಾಲದೇಶಗಳ ಅಗತ್ಯತೆ ಮತ್ತು ಚಿಂತನೆಗಳಿಗೆ ಅನುಗುಣವಾಗಿ ಬದಲಾಗುವ ವಿಷಯ ಜ್ಞಾನವನ್ನು ನೀಡುವುದೇ ಶಿಕ್ಷಣದ ಪರಮೋಚ್ಚ ಗುರಿ. ಇದನ್ನರಿತ ಸಮುದಾಯದೊಳಗಿನ ಹಾಗೂ ಹೊರಗಿನ ಹಿತೈಷಿಗಳು ನೂತನ ಪಠ್ಯವಸ್ತುವಿನ ರಚನೆಗಾಗಿ ಆಗ್ರಹಿಸಿದ್ದು ಸಮಯೋಚಿತವಾದುದಾಗಿದೆ. ಕರ್ನಾಟಕ ಶಿಕ್ಷಣ ವ್ಯವಸ್ಥೆಯ ಪ್ರಜ್ಞಾಚಕ್ಷುಗಳಂತಿರುವ ಡಿ. ಎಸ್. ಇ. ಆರ್. ಟಿ. ಮತ್ತು ಕರ್ನಾಟಕ ಪಠ್ಯಪುಸ್ತಕ ಸಂಘಗಳು ಆಗ್ರಹ ಪೂರ್ವಕ ಬೇಡಿಕೆಗೆ ಸಕಾರಾತ್ಮವಾಗಿ ಸ್ಪಂದಿಸುತ್ತಿವೆ. ದೃಷ್ಟಿವಿಶ್ವಾಸಿಗರ ಮತ್ತು ಕಲಿಕಾಸಕ್ತರ ಶೈಕ್ಷಣಿಕ ಸಂವರ್ಧನೆಯ ಹಕ್ಕಿಗೂ ಪುಷ್ಟಿ ನೀಡುತ್ತಿವೆ.

ರಾಜ್ಯ ಮತ್ತು ಸರಕಾರಗಳಿಗೆ ಸಂಬಂಧಿಸಿದ ಚಿಂತನೆಗಳು, ಚಟುವಟಿಕೆಗಳು, ವ್ಯವಹಾರಗಳು ಮತ್ತು ವಿವಾದಾಂಶಗಳ ವಿಶಿಷ್ಟ ಹಾಗೂ ಗತಿಶೀಲ ಅಧ್ಯಯನವೆ ರಾಜ್ಯಶಾಸ್ತ್ರವಾಗಿದೆ. ಇದರ ಜ್ಞಾನವು ಈ ವಿಶೇಷ ಮಕ್ಕಳಿಗೆ ಅತ್ಯಗತ್ಯವಾಗಿದೆ. ದೃಷ್ಟಿವಿಶ್ವಾಸಿಗರು ಮತ್ತು ಕಲಿಕಾಸಕ್ತ ಮಕ್ಕಳೂ ಸಹ ಸ್ವತಂತ್ರವಾಗಿ ವಿಚಾರ ಮಾಡಲು ಜೀವನ ಮೌಲ್ಯವನ್ನು ಅಳವಡಿಸಿಕೊಳ್ಳಲು ಮತ್ತು ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತಯಾರಾಗುವಂತೆ ಪ್ರೇರಿಪಿಸಲು ನೂತನ ಪಠ್ಯವಸ್ತುವಿನ ರಚನೆ ಪೂರ್ಣಗೊಂಡಿದೆ. ವಿದ್ಯಾರ್ಥಿಗಳು 8ನೇ ತರಗತಿಯಲ್ಲಿ ರಾಜ್ಯಶಾಸ್ತ್ರದ ಮೂಲ ಪರಿಕಲ್ಪನೆಗಳು, 9 ನೇ ತರಗತಿಯಲ್ಲಿ ರಾಜಕೀಯ ಚಿಂತಕರು ಮತ್ತು ರಾಜಕೀಯ ಸಂಸ್ಥೆಗಳನು ಮತ್ತು 10 ನೇ ತರಗತಿಯಲ್ಲಿ ನಮ್ಮ ಭಾರತದ ಸಂವಿಧಾನವನ್ನು ಅಭ್ಯಾಸ ಮಾಡಬೇಕಾಗುತ್ತದೆ. ಇವರ ಉಜ್ವಲ ಭವಿಷ್ಯದ ಹಿತದೃಷ್ಟಿಯಿಂದ 2015-16 ನೇ ಶೈಕ್ಷಣಿಕ ವರ್ಷದಿಂದಲೇ 10 ನೇ ತರಗತಿಗೆ ಭಾರತದ ಸಂವಿಧಾನವನ್ನು ಅಭ್ಯಾಸ ಮಾಡಲು ಪರಿಚಯಿಸಿ ಜಾರಿಗೊಳಿಸಲಾಗಿದೆ. 2016-17 ನೇ ಸಾಲಿನಿಂದ 8 ನೇ ತರಗತಿಗೆ 'ರಾಜ್ಯಶಾಸ್ತ್ರದ ಮೂಲಭೂತ ಪರಿಕಲ್ಪನೆಗಳು' ಎಂಬ ಶೀರ್ಷಿಕೆಯಡಿಯಲ್ಲಿ ರಚಿತಗೊಂಡ ಪಠ್ಯಪುಸ್ತಕವನ್ನು ಪರಿಚಯಿಸಿ ಜಾರಿಗೊಳಿಸಲಾಗುತ್ತಿದೆ.

ರಾಜ್ಯಶಾಸ್ತ್ರದ ಅರ್ಥ, ಸ್ವರೂಪ, ವ್ಯಾಪ್ತಿ, ಮಹತ್ವ ಮತ್ತು ಇತರ ಸಮಾಜ ವಿಜ್ಞಾನಗಳೊಡನೆ ಹೊಂದಿರುವ ಸಂಬಂಧಗಳನ್ನು ವಿದ್ಯಾರ್ಥಿಗಳು ಅರಿತುಕೊಳ್ಳಬೇಕಾಗುತ್ತದೆ. ಅದರಂತೆಯೇ ರಾಜ್ಯ, ಪೌರ, ಪೌರತ್ವ, ಕಾನೂನು, ಸ್ವಾತಂತ್ರ್ಯ ಸಮಾನತೆ, ನ್ಯಾಯ, ಹಕ್ಕು ಮತ್ತು ಕರ್ತವ್ಯಗಳು, ಸಂವಿಧಾನ ಹಾಗೂ ನಾಗರೀಕ ಸೇವಾ ವರ್ಗದಂತಹ ಮೂಲ ಪರಿಕಲ್ಪನೆಗಳ ಬಗೆಗೆ ಶಿಕ್ಷಕರು ತಮ್ಮ ಪಾಠ ಪ್ರವಚನಗಳ ಮೂಲಕ ವಿದ್ಯಾರ್ಥಿಗಳಲ್ಲಿ ಪೂರ್ಣ ತಿಳುವಳಿಕೆಯನ್ನು ಮೂಡಿಸಬೇಕಿದೆ. ಅನೇಕ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಮಾಹಿತಿ ಪ್ರಧಾನ ಉತ್ತರಗಳನ್ನು ಬಯಸುವ ಪ್ರಶ್ನೆಗಳಿಗಿಂತಲೂ ಪರಿಕಲ್ಪನೆಗಳನ್ನು ಕೇಂದ್ರೀಕರಿಸಿ ಉತ್ತರಗಳನ್ನು ಅಪೇಕ್ಷಿಸುವ ಪ್ರಶ್ನೆಗಳನ್ನು ಕೇಳಲಾಗುತ್ತಿದೆ. ಮೂಲ ಪರಿಕಲ್ಪನೆಗಳ ಜ್ಞಾನವೇ ರಾಜ್ಯಶಾಸ್ತ್ರದ ಸವಿಸ್ತಾರ ಮತ್ತು ಸಮಗ್ರ ಅಧ್ಯಯನಕ್ಕೆ ಅಡಿಪಾಯವಾಗಿದೆ. ಅಂತರ್ಗತ ವಿಧಾನ (Integrated Approach) ರಚನಾತ್ಮಕ ವಿಧಾನ (Constructive Approach) ಮತ್ತು ಸುರುಳಿಯಾಕಾರದ (Spiral Approach) ವಿಧಾನಗಳನ್ನು ಅನುಸರಿಸಿ ಪಠ್ಯಪುಸ್ತಕವನ್ನು ರಚಿಸಲಾಗಿದೆ. ಎಂಟನೆಯ ತರಗತಿಯ ಸಾಮಾನ್ಯ ವಿದ್ಯಾರ್ಥಿಗಳಿಗೆ ಜಾರಿಯಲ್ಲಿರುವ ಸಮಾಜವಿಜ್ಞಾನ ವಿಷಯದಲ್ಲಿನ ರಾಜ್ಯಶಾಸ್ತ್ರ ವಿಷಯಕ್ಕೆ ಸಂಬಂಧಿಸಿದಂತೆ ಕೆಲವು ಅಧ್ಯಾಯಗಳು ಈ ಪಠ್ಯಪುಸ್ತಕದಲ್ಲಿದೆ. ಆದರೆ ಈ ಪಠ್ಯಪುಸ್ತಕದಲ್ಲಿ ಸವಿಸ್ತಾರವಾದ ಮಾಹಿತಿಯನ್ನು ನೀಡಿ ವಿದ್ಯಾರ್ಥಿಗಳ ಜ್ಞಾನಾಭಿವೃದ್ಧಿಗೆ ಪೂರಕವಾಗುವಂತೆ ಪಠ್ಯಪುಸ್ತಕವನ್ನು ಸಿದ್ಧಪಡಿಸಲಾಗಿದೆ.

8 ನೇ ತರಗತಿಗಾಗಿ ರಾಜ್ಯಶಾಸ್ತ್ರದ ಮೂಲ ಪರಿಕಲ್ಪನೆಗಳು ಎಂಬ ಶಿರೋನಾಮೆಯಡಿಯಲ್ಲಿ ಪಠ್ಯಪುಸ್ತಕವನ್ನು 2005 ರ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು ಮತ್ತು ಎನ್. ಸಿ. ಎಫ್. ಆಧಾರಿತ ಕರ್ನಾಟಕ ಪಠ್ಯಕ್ರಮ ಮಾರ್ಗದರ್ಶಿ ತತ್ವಗಳನ್ನಾಧರಿಸಿ ರಚಿಸಲಾಗಿದೆ.

ರಾಜ್ಯಶಾಸ್ತ್ರ ಪಠ್ಯಪುಸ್ತಕ ರಚನಾ ಸಮಿತಿಯ ಅಧ್ಯಕ್ಷರು ಮತ್ತು ಸದಸ್ಯರುಗಳಿಗೆ 2015 ರ ಸೆಪ್ಟೆಂಬರ್‌ನಲ್ಲಿ ಏರ್ಪಡಿಸಿದ ಮೊದಲನೇ ಕಾರ್ಯಗಾರದಲ್ಲಿ ಪಠ್ಯಪುಸ್ತಕದ ಸ್ವರೂಪ ಮತ್ತು ಶೈಲಿಯ ಬಗ್ಗೆ ಸಮಗ್ರ ಮಾಹಿತಿ ನೀಡಿತು. ಅವುಗಳನ್ನು ಗಮನದಲ್ಲಿಟ್ಟುಕೊಂಡು ಈ ಪಠ್ಯಪುಸ್ತಕವನ್ನು ರಚಿಸಲಾಗಿದೆ. ಮಕ್ಕಳು ರಾಜ್ಯಶಾಸ್ತ್ರದ ಮೂಲ ಪರಿಕಲ್ಪನೆಗಳ ಬಗ್ಗೆ ಹೆಮ್ಮೆ ಪಡುವಂತಹ ಸ್ವಾರಸ್ಯಕರ ವಿಷಯಗಳನ್ನು ಒಳಗೊಂಡ 10 ಪರಿಚಯಾತ್ಮಕ ಅಧ್ಯಾಯಗಳನ್ನು ನೀಡಲಾಗಿದೆ. ಮಕ್ಕಳಲ್ಲಿ ರಾಜ್ಯಶಾಸ್ತ್ರದ ಮೂಲಭೂತ ಪರಿಕಲ್ಪನೆಗಳ ಕುರಿತಾದ ಆಸಕ್ತಿ ಮತ್ತು ಜ್ಞಾನವನ್ನು ಹೆಚ್ಚಿಸುವುದೇ ಈ ಅಧ್ಯಾಯಗಳ ಉದ್ದೇಶವಾಗಿದೆ. ಆದ್ದರಿಂದಲೇ ಈ ಪುಸ್ತಕವು ಕನ್ನಡ ಭಾಷೆಯಲ್ಲಿ ರಾಜ್ಯಶಾಸ್ತ್ರದ ಮೂಲಭೂತ ಪರಿಕಲ್ಪನೆಗಳ ಕುರಿತಾದ ಒಂದು ಕಿರು ಸಂಪನ್ಮೂಲ ಪುಸ್ತಕವಾಗಿದೆ ಎಂದು ಹೇಳಲು ಹೆಮ್ಮೆಯೆನಿಸುತ್ತದೆ. ಪ್ರತಿ ಅಧ್ಯಾಯದ ಆರಂಭದಲ್ಲಿ ಕಲಿಕೆಯ ಉದ್ದೇಶಗಳು ಮತ್ತು ತಜ್ಞರ ಹೇಳಿಕೆಯೊಂದಿಗೆ ವಸ್ತುವಿಷಯದ ಸೂಕ್ಷ್ಮ ಪರಿಚಯವಿದೆ. ಶಿಕ್ಷಕರು ನಿದರ್ಶನಗಳನ್ನು ನೀಡುತ್ತಾ ಅಂತರ್ಗತ, ರಚನಾತ್ಮಕ ಮತ್ತುಸುರುಳಿಯಾಕಾರದ ವಿಧಾನಗಳನ್ನು ಅನುಸರಿಸುತ್ತಾ ಮಕ್ಕಳನ್ನು ಆಕರ್ಷಿಸಬಹುದು. ಅಧ್ಯಾಯದ ಕೊನೆಯಲ್ಲಿ ದೃಢೀಕರಣಕ್ಕಾಗಿ ಅಭ್ಯಾಸವನ್ನು ಕೊಡಲಾಗಿದೆ. ಮಕ್ಕಳಲ್ಲಿ ಸೃಜನಶೀಲತೆ, ಚಿಂತನಾಶೀಲತೆ ಮತ್ತು ಕೌಶಲ್ಯ ಅಭಿವೃದ್ಧಿಗಾಗಿ ಸಲಹಾತ್ಮಕ ಚಟುವಟಿಕೆಗಳನ್ನು ನೀಡಲಾಗಿದೆ. ಶಿಕ್ಷಕರು ಅವುಗಳನ್ನು ಮಾಡಲು ಮಕ್ಕಳಿಗೆ ಉತ್ತೇಜಿಸಿ,

ಮಾರ್ಗದರ್ಶಿಸುವುದು ಉತ್ತಮ. ಮಕ್ಕಳ ಜ್ಞಾನವೃದ್ಧಿಗಾಗಿ ಸ್ವಯಂ ಆಸಕ್ತಿಯಿಂದ ತಿಳಿಯಬೇಕಾದ ಹೆಚ್ಚಿನ ಮಾಹಿತಿಯನ್ನು ಚೌಕದಲ್ಲಿ ನೀಡಲಾಗಿದೆ. ಈ ವಿಷಯಗಳ ಕುರಿತಾಗಿ ಲಿಖಿತ ಅಥವಾ ಮೌಖಿಕ ಪರೀಕ್ಷೆಗಳಲ್ಲಿ ಪ್ರಶ್ನೆಗಳನ್ನು ಕೇಳಲು ಅವಕಾಶವಿರುವುದಿಲ್ಲ. ಭೋಧನೆಗೆ ಲಭ್ಯವಿರುವ ಅವಧಿಗಳನ್ನು ಆಧರಿಸಿ ಅಧ್ಯಾಯಗಳನ್ನು ಹಂಚಿಕೆ ಮಾಡಲಾಗಿದೆ.

ಪಠ್ಯಪುಸ್ತಕವನ್ನು ಸಾಧ್ಯವಿರುವಷ್ಟು ದೋಷ ಮುಕ್ತಗೊಳಿಸಲು ಪ್ರಯತ್ನಿಸಲಾಗಿದೆ. ವಿದ್ಯಾರ್ಥಿಗಳು, ಶಿಕ್ಷಕರು, ಪೋಷಕರು ಹಾಗೂ ಸಾರ್ವಜನಿಕರು ಪುಸ್ತಕದ ಕುರಿತಾದ ಮೆಚ್ಚುಗೆ ಮತ್ತು ಕುಂದುಕೊರತೆಗಳನ್ನು ಪತ್ರಮುಖೇನ ಸಂಯೋಜಕರಿಗೆ ತಿಳಿಸಿದರೆ ಅವುಗಳನ್ನು ಪರಿಷ್ಕರಣೆಯ ಹಂತದಲ್ಲಿ ಪರಿಗಣಿಸಬಹುದು. ತಮ್ಮ ಸಲಹೆ, ಸೂಚನೆಗಳನ್ನು ಹೃದಯಪೂರ್ವಕವಾಗಿ ಸ್ವಾಗತಿಸುತ್ತೇವೆ. ಈ ಪಠ್ಯಪುಸ್ತಕ ರಚನಾ ಕಾರ್ಯದಲ್ಲಿ ಹೆಚ್ಚಿನ ಸಹಕಾರ ನೀಡಿದ ಕರ್ನಾಟಕ ಪಠ್ಯಪುಸ್ತಕ ಸಂಘದ ವ್ಯವಸ್ಥಾಪಕ ನಿರ್ದೇಶಕರಿಗೂ, ಸಂಯೋಜಕರಿಗೂ, ಪರಿಶೀಲಕರಿಗೂ, ಭಾಷಾಂತರಕಾರರಿಗೂ ಮತ್ತು ಮತ್ತಿತರ ಸಿಬ್ಬಂಧಿ ವರ್ಗದವರಿಗೂ ನಾವು ಅಭಾರಿಯಾಗಿದ್ದೇವೆ. ರಾಜ್ಯಶಾಸ್ತ್ರ ಪಠ್ಯಪುಸ್ತಕ ರಚನಾ ಸಮಿತಿಯ ಸದಸ್ಯರುಗಳೆಲ್ಲರೂ ತಮ್ಮ ಅಮೂಲ್ಯವಾದ ಜ್ಞಾನುನುಭವಗಳೆಲ್ಲಾ ಪಠ್ಯಪುಸ್ತಕ ರಚನೆಗಾಗಿ ಧಾರೆಯೆರೆದು ಅವಿಸ್ಮರಣೀಯ ಸಹಕಾರ ನೀಡಿದ್ದಾರೆ. ಅವರಿಗೂ, ಪರಿಶೀಲಕರಿಗೂ ಮತ್ತು ಪುಸ್ತಕವನ್ನು ಅಂದವಾಗಿ ಮುದ್ರಿಸಿದವರಿಗೂ ವೈಯಕ್ತಿವಾಗಿ ನಾನು ಮತ್ತು ನನ್ನ ದೃಷ್ಟಿವಿಶಾಸ್ಸಿಗರು ಮತ್ತು ಕಲಿಕಾಸಕ್ತ ಮಕ್ಕಳ ಸಮುದಾಯ ಸದಾ ಚಿರಋಣಿಗಳು. ಈ ಪಠ್ಯಪುಸ್ತಕವು ಸಾಮಾನ್ಯ ಲಿಪಿಯೊಂದಿಗೆ ಬ್ರೈಲ್ ಲಿಪಿ ಮತ್ತು ಧ್ವನಿಸುರುಳಿಗಳಲ್ಲಿ ಮುದ್ರಿತವಾಗಿ ದೃಷ್ಟಿವಿಶ್ವಾಸಿಗರು ಮತ್ತು ಕಲಿಕಾಸಕ್ತ ಮಕ್ಕಳ ದಿಟ್ಟ ಮುನ್ನಡೆಗೆ ನೆರವಾಗಲೆಂದು ಆಶಿಸುತ್ತೇವೆ.

**ಡಾ. ಕೃಷ್ಣ ಹೊಂಬಳ್,** ಅಧ್ಯಕ್ಷರು, ರಾಜ್ಯಶಾಸ್ತ್ರ ಪಠ್ಯಪುಸ್ತಕ ರಚನಾ ಸಮಿತಿ.

## ಪಠ್ಯಪುಸ್ತಕ ರಚನಾ ಸಮಿತಿ

**ಸಲಹೆ ಮತ್ತು ಮಾರ್ಗದರ್ಶನ:**

**ಡಾ. ಬರಗೂರು ರಾಮಚಂದ್ರಪ್ಪ,** ಅಧ್ಯಕ್ಷರು, ರಾಜ್ಯ ಪಠ್ಯಪುಸ್ತಕ ಪರಿಷ್ಕರಣ ಸಮಿತಿಗಳು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

**ಶ್ರೀ ನಾಗೇಂದ್ರ ಕುಮಾರ್,** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

**ಅಧ್ಯಕ್ಷರು:**

**ಡಾ. ಕೃಷ್ಣ ಹೊಂಬಳ್**, ಸಹಾಯಕ ಪ್ರಾಧ್ಯಾಪಕರು, ರಾಜ್ಯಶಾಸ್ತ್ರ ಅಧ್ಯಯನ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ, ಮಾನಸ ಗಂಗೋತ್ರಿ, ಮೈಸೂರು.

**ಸದಸ್ಯರುಗಳು:**

**ಶ್ರೀ ವೈ. ರಾಮಕೃಷ್ಣರಾವ್,** ನಿವೃತ್ತ ರಾಜ್ಯಶಾಸ್ತ್ರ ಉಪನ್ಯಾಸಕರು, ಎರ್ಮಾಳು, ಉಡುಪಿ ಜಿಲ್ಲೆ.

**ಶ್ರೀ ಈರಣ್ಣ ಎಂ. ಅಂಬಿ,** ಸಹಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ತಡಕ ಧಾರವಾಡ ಗ್ರಾಮೀಣ ತಾ.

**ಶ್ರೀ. ಪೂರ್ಣಚಂದ್ರ ಟಿ. ಜಿ.,** ಉಪನ್ಯಾಸಕರು, ಸ. ಪ. ಪೂ. ಕಾಲೇಜು, ಬೇಲೂರು, ಹಾಸನ ಜಿಲ್ಲೆ.

**ಶ್ರೀಮತಿ ಕೆ. ವಿ. ಶಿಲ್ಪಾ,** ಸಹಶಿಕ್ಷಕರು, ಸ. ಹಿ. ಪ್ರಾ. ಶಾಲೆ, ಚೆನ್ನನಕೋಟೆ, ವಿರಾಜಪೇಟೆ ತಾಲ್ಲೂಕು, ಕೊಡಗು ಜಿಲ್ಲೆ.

ಪರಿಶೀಲಕರು:

**ಪ್ರೊ. ಜಿ. ಟಿ. ರಾಮಚಂದ್ರಪ್ಪ,** ಪ್ರಾಧ್ಯಾಪಕರು, ರಾಜ್ಯಶಾಸ್ತ್ರ ಅಧ್ಯಯನ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ ಮಾನಸ ಗಂಗೋತ್ರಿ, ಮೈಸೂರು.

**ಶ್ರೀಮತಿ ಸಿ. ನಾಗಮಣಿ,** ಉಪನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

**ಕಾರ್ಯಕ್ರಮ ಸಂಯೋಜಕರು:**

**ಶ್ರೀಮತಿ ಎನ್. ಎಸ್. ಸೌಮ್ಯ,** ಸಹಾಯಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

## ಪರಿವಿಡಿ

| **ಅಧ್ಯಾಯ** | **ಶೀರ್ಷಿಕೆ** |
|---|---|
| 1 | ರಾಜ್ಯಶಾಸ್ತ್ರದ ಪರಿಚಯ (Introduction to the Political Science) |
| 2 | ರಾಜ್ಯಶಾಸ್ತ್ರ ಮತ್ತು ಇತರೆ ಸಮಾಜ ವಿಜ್ಞಾನಗಳ ಸಂಬಂಧ (Relationship between Political Science and other Social Science) |
| 3 | ರಾಜ್ಯ ಮತ್ತು ಪೌರ (State and Citizen) |
| 4 | ಕಾನೂನು (Law) |
| 5 | ಸ್ವಾತಂತ್ರ್ಯ(Liberty) |
| 6 | ಸಮಾನತೆ (Equality) |
| 7. | ನ್ಯಾಯ (Justice) |
| 8 | ಹಕ್ಕು ಮತ್ತು ಕರ್ತವ್ಯಗಳು (Rights and Duties) |
| 9 | ಸಂವಿಧಾನ (Constitution) |
| 10 | ನಾಗರಿಕ ಸೇವಾ ವರ್ಗ (Civil Services) |

## ಅಧ್ಯಾಯ-1 ರಾಜ್ಯಶಾಸ್ತ್ರದ ಪರಿಚಯ (Introduction to the Political Science)

**ಕಲಿಕಾ ಉದ್ದೇಶಗಳು**

1. ರಾಜ್ಯಶಾಸ್ತ್ರದ ಹುಟ್ಟು ಮತ್ತು ಬೆಳವಣಿಗೆಗಳನ್ನು ತಿಳಿದುಕೊಳ್ಳುವುದು.
2. ರಾಜ್ಯಶಾಸ್ತ್ರಕ್ಕೆ ಪ್ರಾಚೀನ ಭಾರತೀಯ ಚಿಂತಕರ ಕೊಡುಗೆಗಳನ್ನು ಮೆಚ್ಚಿಕೊಳ್ಳುವುದು.
3. ರಾಜ್ಯಶಾಸ್ತ್ರದ ಅರ್ಥ ಮತ್ತು ವ್ಯಾಖ್ಯೆಗಳನ್ನು ಮನದಟ್ಟು ಮಾಡಿಕೊಳ್ಳುವುದು.
4. ರಾಜ್ಯಶಾಸ್ತ್ರದ ಸ್ವರೂಪ ಮತ್ತು ವ್ಯಾಪ್ತಿಯನ್ನು ಅರಿತುಕೊಳ್ಳುವುದು.
5. ಸಮಕಾಲೀನ ಪ್ರಪಂಚದಲ್ಲಿ ರಾಜ್ಯಶಾಸ್ತ್ರ ಅಧ್ಯಯನದ ಮಹತ್ವವನ್ನು ತಿಳಿದುಕೊಳ್ಳುವುದು.

“ರಾಜ್ಯಶಾಸ್ತ್ರವೆಂದರೆ ರಾಜ್ಯ ಹಿಂದೆ ಹೇಗಿತ್ತು ಎಂಬುದರ ಐತಿಹಾಸಿಕ ಸಂಶೋಧನೆ, ರಾಜ್ಯವು ಈಗ ಹೇಗಿದೆ ಎನ್ನುವುದರ ವಿಮರ್ಶಾತ್ಮಕ ಚಿಂತನೆ ಹಾಗೂ ರಾಜ್ಯವು ಮುಂದೆ ಹೇಗಿರಬೇಕು ಎನ್ನುವುದರ ರಾಜನೈತಿಕ ಚರ್ಚೆಯೇ ಆಗಿದೆ”. **ಆರ್. ಜಿ. ಗೆಟಲ್.**

“ಸಂಘಟಿತ ಮಾನವ ಸಮಾಜದ ರಾಜಕೀಯ ಚಟುವಟಿಕೆಗಳನ್ನು ಕುರಿತು ಅಧ್ಯಯನ ಮಾಡುವ ಶಾಸ್ತ್ರವೇ ರಾಜ್ಯಶಾಸ್ತ್ರ” **ಕ್ಯಾಟಲಿನ್.**

### ಪೀಠಿಕೆ:

ಈ ವಿಶ್ವದಲ್ಲಿ ಪ್ರತಿಯೊಬ್ಬ ವ್ಯಕ್ತಿಯು ಸರ್ವತಂತ್ರ ಸ್ವತಂತ್ರನಾಗಿ ಬಾಳಲು ಇಚ್ಛಿಸುತ್ತಾನೆ. ತನ್ನ ಮನಸಿಗೆ ಬಂದಂತೆ ಆಲೋಚನೆ ಮಾಡಿ ಅದರಂತೆ ನಡೆಯಲು ಬಯಸುತ್ತಾನೆ. ಆದರೆ ಅವನು ಸಮಾಜ ಜೀವಿಯಾಗಿರುವುದರಿಂದ ತನ್ನಿಷ್ಟದಂತೆ ನಡೆಯಲು ಸಾಧ್ಯವಾಗುವುದಿಲ್ಲ. ಸಮಾಜದಲ್ಲಿ ಅವನಂತೆ ಅನೇಕ ವ್ಯಕ್ತಿಗಳಿರುತ್ತಾರೆ. ಅವರೂ ಇದೇ ಬಯಕೆಗಳನ್ನು ಹೊಂದಿರುತ್ತಾರೆ. ಎಲ್ಲರೂ ಮನಬಂದಂತೆ ವರ್ತಿಸಿದರೆ ವ್ಯಕ್ತಿ ವ್ಯಕ್ತಿಗಳಲ್ಲಿ, ಗುಂಪು ಗುಂಪುಗಳಲ್ಲಿ ಸಂಘರ್ಷ ಸಂಭವಿಸಬಹುದು. ಇದರಿಂದ ಸಮಾಜದ ವ್ಯವಸ್ಥೆಯೇ ಹಾಳಾಗಬಹುದು. ಆದುದರಿಂದ ಸಮಾಜವು ಪ್ರಗತಿಪಥದಲ್ಲಿ ಸಾಗಬೇಕಾದರೆ ಅದರ ನಿಯಂತ್ರಣಕ್ಕೆ ಕೆಲವು ಕಾಯಿದೆ, ಕಟ್ಟಳೆಗಳು ಬೇಕಾಗುತ್ತವೆ. ಕಾಯಿದೆಗಳನ್ನು ರೂಪಿಸಲು ಸರ್ಕಾರ ಇರಬೇಕಾಗುತ್ತದೆ. ಸರ್ಕಾರವು ಸಮಾಜದ ಸಾಮಾಜಿಕ, ಧಾರ್ಮಿಕ, ಆರ್ಥಿಕ ಮತ್ತು ನೈತಿಕ ಜೀವನವನ್ನು ವ್ಯವಸ್ಥಿತಗೊಳಿಸಿ ಶಾಂತಿಯುತ ಸಹಬಾಳ್ವೆಗೆ ಸಹಕರಿಸುತ್ತದೆ. ಈ ರೀತಿ ಒಂದು ಜನಸಮುದಾಯವು ಆಡಳಿತ ಉದ್ದೇಶದಿಂದ ಏಕಘಟಕವಾಗಿ ಹೊರಹೊಮ್ಮಿದಾಗ ಅದು ರಾಜಕೀಯವಾಗಿ ಸುಸಂಘಟಿತವಾದ ಒಂದು ರಾಜ್ಯವೆನಿಸುತ್ತದೆ. ರಾಜ್ಯವು ಸರ್ಕಾರದ

ಮೂಲಕ ತನ್ನ ಗುರಿಗಳನ್ನು ಸಾಧಿಸುತ್ತದೆ. ರಾಜ್ಯಶಾಸ್ತ್ರವು ರಾಜ್ಯದ ಹುಟ್ಟು, ಸ್ವರೂಪ ಮತ್ತು ಅದರ ಬೆಳವಣಿಗೆಗೆ ಸಂಬಂಧಪಟ್ಟ ಶಾಸ್ತ್ರವಾಗಿದೆ.

## 1.1 ರಾಜ್ಯಶಾಸ್ತ್ರದ ಅರ್ಥ:

'ಜೀನ್ ಬೋಡಿನ್ ಎಂಬ ಫ್ರೆಂಚ್ ರಾಜಕೀಯ ತತ್ವಜ್ಞಾನಿ ಪ್ರಪ್ರಥಮ ಬಾರಿಗೆ ರಾಜ್ಯಶಾಸ್ತ್ರ' ಎಂಬ ಪದವನ್ನು ಬಳಸಿದರು. ಪ್ರಾಚೀನ ಗ್ರೀಕ್ ತತ್ವಜ್ಞಾನಿ ಅರಿಸ್ಟಾಟಲ್ ರಾಜ್ಯದ ಬಗ್ಗೆ ಗ್ರಂಥ ರಚಿಸಿ ಅದಕ್ಕೆ 'ದಿ ಪಾಲಿಟಿಕ್ಸ್' ಎಂಬ ಹೆಸರಿಟ್ಟರು. ಪಾಲಿಟಿಕ್ಸ್ ಎಂಬ ಇಂಗ್ಲೀಷ್ ಪದವು 'ಪಾಲಿಟಿಕಸ್' ಎಂಬ ಲಾಟಿನ್ ಪದದಿಂದ ಬಂದಿದೆ. ಆದುದರಿಂದ ರಾಜ್ಯಶಾಸ್ತ್ರವು ಗ್ರೀಕ್ ಪದವಾದ 'ಪಾಲಿಸ್' (Polis) ನಿಂದ ಬಂದಿದೆ. ಪಾಲಿಸ್ ಎಂದರೆ "ನಗರ-ರಾಜ್ಯ" (City State) ಎಂದರ್ಥ. ಪ್ರಾಚೀನ ಕಾಲದಲ್ಲಿ ಗ್ರೀಕರು ಸಣ್ಣ ಪುಟ್ಟ ನಗರ ರಾಜ್ಯಗಳಲ್ಲಿ ವಾಸಿಸುತ್ತಿದ್ದರು. ಪುರಾತನ ನಗರ ರಾಜ್ಯಗಳು ಆಧುನಿಕ ರಾಜ್ಯಗಳಂತೆ ವಿಶಾಲವಾಗಿರಲಿಲ್ಲ. ಸ್ಪಾರ್ಟ, ಅಥೆನ್ಸ್, ಸ್ಟಾಗಿರಾ ಇವು ಗ್ರೀಕ್ ನಗರ ರಾಜ್ಯಗಳಿಗೆ ಉದಾಹರಣೆಗಳಾಗಿವೆ. ಇಂತಹ ನಗರ ರಾಜ್ಯಗಳ ಆಡಳಿತವನ್ನು ವಿವರಿಸುವ ಶಾಸ್ತ್ರವನ್ನು 'ಪಾಲಿಸ್' ಎಂದು ಕರೆಯುತ್ತಿದ್ದರು. ಆದುದರಿಂದ ರಾಜ್ಯಶಾಸ್ತ್ರವು ರಾಜ್ಯ ಮತ್ತು ಸರ್ಕಾರದ ಕಾರ್ಯನಿರ್ವಹಣೆಯನ್ನು ವಿವರಿಸುವ ಶಾಸ್ತ್ರವಾಗಿದೆ.

## 1.2 ರಾಜ್ಯಶಾಸ್ತ್ರದ ವ್ಯಾಖ್ಯೆಗಳು:

ರಾಜ್ಯಶಾಸ್ತ್ರದ ಬಗ್ಗೆ ಅನೇಕ ಚಿಂತಕರು ತಮ್ಮದೇ ಆದ ವ್ಯಾಖ್ಯೆಗಳನ್ನು ನೀಡಿದ್ದಾರೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ:

1. **ಸರ್ ಜಾನ್ ಸೀಲೆರವರ ಪ್ರಕಾರ:** "ಅರ್ಥಶಾಸ್ತ್ರವು ಆರ್ಥಿಕ ಚಟುವಟಿಕೆಗಳನ್ನು, ಜೀವಶಾಸ್ತ್ರವು ಸಕಲ ಜೀವರಾಶಿಗಳ ಜೀವನವನ್ನು, ಸಂಖ್ಯಾಶಾಸ್ತ್ರವು ಅಂಕಿ ಅಂಶಗಳ ಅಧ್ಯಯನ ಮಾಡುವಂತೆ ಸರ್ಕಾರದ ವಿದ್ಯಮಾನಗಳ ಅಧ್ಯಯನ ಮಾಡುವ ಶಾಸ್ತ್ರವೇ ರಾಜ್ಯಶಾಸ್ತ್ರ".
2. **ಗಾರ್ನರ್ರವರ ಪ್ರಕಾರ:** "ರಾಜ್ಯದಿಂದ ಆರಂಭವಾಗಿ ರಾಜ್ಯದೊಡನೆಯೇ ಪರಿಸಮಾಪ್ತಿಗೊಳ್ಳುವ ಅಧ್ಯಯನವೇ ರಾಜ್ಯಶಾಸ್ತ್ರ".
3. **ಪಾಲ್ ಜನೆಟ್‌ರವರ ಪ್ರಕಾರ:** "ರಾಜ್ಯದ ಮೂಲ ಮತ್ತು ಸರ್ಕಾರದ ತತ್ವಗಳನ್ನು ಕುರಿತು ಅಧ್ಯಯನ ಮಾಡುವ ಶಾಸ್ತ್ರವೇ ರಾಜ್ಯಶಾಸ್ತ್ರ".
4. **ಆರ್. ಜಿ. ಸೊಲ್ತಾನ್‌ರವರ ಪ್ರಕಾರ:** "ಸಮಾಜದ ರಾಜಕೀಯ ಚಟುವಟಿಕೆಗಳನ್ನು ರಾಜ್ಯದ ಮೂಲಕ ನಡೆಸಿದಾಗ ಅವುಗಳನ್ನು ಕುರಿತ ಅಧ್ಯಯನವೇ ರಾಜ್ಯಶಾಸ್ತ್ರ"
5. **ಗ್ಯಾರೀಸ್‌ರವರ ಪ್ರಕಾರ:** "ರಾಜ್ಯದ ತಳಹದಿ, ಪ್ರಗತಿ, ಧ್ಯೇಯೋದ್ದೇಶ ಮತ್ತು ಅದರ ಎಲ್ಲ ರಾಜಕೀಯ ಸಮಸ್ಯೆಗಳ ಅಧ್ಯಯನವೇ ರಾಜ್ಯಶಾಸ್ತ್ರ."

ಈ ಎಲ್ಲಾ ವ್ಯಾಖ್ಯೆಗಳನ್ನು ಗಮನಿಸಿದಾಗ ರಾಜ್ಯಶಾಸ್ತ್ರವು ಸಂಘಟಿತ ಸಮಾಜದಲ್ಲಿ ಮಾನವನ ರಾಜಕೀಯ ಚಟುವಟಿಕೆಗಳು ಮತ್ತು ರಾಜ್ಯ ಹಾಗೂ ಸರ್ಕಾರವನ್ನು ಕುರಿತು ಅಧ್ಯಯನ ಮಾಡುವ ಶಾಸ್ತ್ರವಾಗಿದೆ ಎಂದು ತಿಳಿಯಬಹುದು. ಇಂತಹ ಅರ್ಥ ಮತ್ತು ವ್ಯಾಖ್ಯೆಗಳುಳ್ಳ ರಾಜ್ಯಶಾಸ್ತ್ರಕ್ಕೆ ಅಷ್ಟೇ ಕುತೂಹಲಕಾರಿಯಾದ ಹಿನ್ನೆಲೆಯೂ ಇದೆ.

## 1.3 ರಾಜ್ಯಶಾಸ್ತ್ರ ಅಧ್ಯಯನದ ಹುಟ್ಟು:

ರಾಜ್ಯಶಾಸ್ತ್ರದ ಉಗಮಕ್ಕೆ ಅನುಕೂಲಕರವಾದ ಸನ್ನಿವೇಶ ಮತ್ತು ವಾತಾವರಣವನ್ನು ಕಲ್ಪಿಸಿಕೊಟ್ಟವರು ಪುರಾತನ ಗ್ರೀಕರು. ಅವರಿಗಿಂತಲೂ ಮೊದಲು ಇತರರು ರಾಜಕೀಯ ವಿಷಯಗಳ ಕುರಿತು ಚಿಂತಿಸಿದ್ದರೂ ರಾಜ್ಯಶಾಸ್ತ್ರವನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡಿದವರಲ್ಲಿ ಗ್ರೀಕರೇ ಮೊದಲಿಗರು. ಗ್ರೀಕ್‌ದೇಶದ ಮೇಧಾವಿಗಳಾದ **ಸಾಕ್ರೆಟೀಸ್, ಪ್ಲೇಟೋ, ಅರಿಸ್ಟಾಟಲ್** ಮೊದಲಾದವರು ರಾಜ್ಯಶಾಸ್ತ್ರದ ಕ್ರಮಬದ್ಧವಾದ ಅಧ್ಯಯನಕ್ಕೆ ಅಮೂಲ್ಯ ಕೊಡುಗೆ ನೀಡಿರುತ್ತಾರೆ. ಈ ಮೂವರನ್ನು ಗ್ರೀಕ್‌ನ '**ತತ್ವಜ್ಞಾನತ್ರಯರು**', '**ಬುದ್ಧಿವಂತ ತ್ರಿವಳಿಗಳು**' ಎಂದು ಕರೆಯಲಾಗಿದೆ.

ವೈಜ್ಞಾನಿಕ ಚಿಂತನೆಯ ಮೂಲಪುರುಷರಾದ ಸಾಕ್ರೆಟೀಸ್‌ರು (ಕ್ರಿ. ಪೂ. 470-399) ಹಲವು ಪ್ರಶ್ನೆಗಳ ಮೂಲಕ ಹೊಸ ವಿಚಾರಧಾರೆಯನ್ನೇ ಹುಟ್ಟು ಹಾಕಿದರು. ತಮ್ಮ ರಾಜಕೀಯ ಚಿಂತನೆಗಳನ್ನು ಸಂವಾದಗಳ ಮೂಲಕ ಶಿಷ್ಯರಿಗೆ ನೀಡಿದರು. ಇವರ ಶಿಷ್ಯರಾದ ಪ್ಲೇಟೋ (ಕ್ರಿ. ಪೂ. 427-347) 'ದಿ ರಿಪಬ್ಲಿಕ್' ಎಂಬ ಮೇರು ಕೃತಿಯನ್ನು ರಚಿಸಿದರು. ನಗರ ರಾಜ್ಯಗಳ ಸಮಸ್ಯೆಗಳನ್ನು ವಿಶ್ಲೇಷಿಸಿ ತಮ್ಮ ವಿಚಾರಗಳನ್ನು ಜಗತ್ತಿಗೆ ತಿಳಿಯಪಡಿಸಿದರು. ರಾಜ್ಯಕ್ಕೆ ಸಂಬಂಧಿಸಿದ ವಿಷಯಗಳನ್ನು ಇತರ ವಿಷಯಗಳಿಂದ ಪ್ರತ್ಯೇಕಿಸಿ ರಾಜ್ಯಶಾಸ್ತ್ರಕ್ಕೆ ಪ್ರತ್ಯೇಕವಾದ ಹಾಗೂ ಸ್ವತಂತ್ರವಾದ ಸ್ಥಾನಮಾನಗಳನ್ನು ಗಳಿಸಿಕೊಟ್ಟ ಕೀರ್ತಿ ಪ್ಲೇಟೋರವರ ಶಿಷ್ಯರಾದ ಅರಿಸ್ಟಾಟಲ್ (ಕ್ರಿ. ಪೂ. 384-322) ರವರಿಗೆ ಸಲ್ಲುತ್ತದೆ. ರಾಜ್ಯಶಾಸ್ತ್ರವನ್ನು ಮೊಟ್ಟಮೊದಲ ಬಾರಿಗೆ ಕ್ರಮಬದ್ಧವಾಗಿ ಅಧ್ಯಯನ ಮಾಡಿದ ಅರಿಸ್ಟಾಟಲ್‌ರವರನ್ನು "ರಾಜ್ಯಶಾಸ್ತ್ರದ ಪಿತಾಮಹ" (Father of Political Science) ಎಂದು ಕರೆಯಲಾಗಿದೆ.

'**ದಿ ಪಾಲಿಟಿಕ್ಸ್**' ಇವರು ರಚಿಸಿದ ಶ್ರೇಷ್ಠ ಕೃತಿಯಾಗಿದೆ. ಅರಿಸ್ಟಾಟಲ್‌ರವರು ರಾಜ್ಯಶಾಸ್ತ್ರವನ್ನು ಇತರ ಸಮಾಜವಿಜ್ಞಾನಗಳಲ್ಲಿ 'ಶ್ರೇಷ್ಠ ವಿಜ್ಞಾನ' (Supreme Science) ಅಥವಾ 'ವಿಜ್ಞಾನಗಳ ರಾಜ' ಎಂದು ಕರೆದಿದ್ದಾರೆ. ಆಧುನಿಕ ಕಾಲದಲ್ಲಿ ಇಟಲಿಯ ರಾಜನೀತಿಜ್ಞ ಮೆಕೈವೆಲ್ಲಿಯವರು '**ದಿ ಪ್ರಿನ್ಸ್**' ಎಂಬ ಕೃತಿಯ ಮೂಲಕ ರಾಜ್ಯಶಾಸ್ತ್ರವನ್ನು ಮತ್ತಷ್ಟು ಸರ್ವಶ್ರೇಷ್ಠ ಅಧ್ಯಯನವನ್ನಾಗಿಸಿದರು.

### *ಭಾರತೀಯರ ಕೊಡುಗೆ:*

ಭಾರತದ ಪ್ರಾಚೀನ ಚಿಂತನೆಯಲ್ಲಿಯೂ ರಾಜ್ಯಶಾಸ್ತ್ರದ ಪರಿಕಲ್ಪನೆಗಳ ಉಲ್ಲೇಖವಿದೆ. ಇದರಿಂದ ಭಾರತೀಯರು ಗ್ರೀಕರಿಗಿಂತ ಮೊದಲೇ ರಾಜ್ಯಶಾಸ್ತ್ರದ ಬಗೆಗೆ

ಅಪಾರವಾದ ಜ್ಞಾನವನ್ನು ಹೊಂದಿದ್ದರು ಎಂದು ತಿಳಿದು ಬರುತ್ತದೆ. ಪ್ರಾಚೀನ ಗ್ರಂಥಗಳಾದ ಋಗ್ವೇದ, ಯಜುರ್ವೇದ, ಕೌಟಿಲ್ಯನ ಅರ್ಥಶಾಸ್ತ್ರ, ಕಮಾಂಡಕನ ನೀತಿಸಾರ, ಶುಕ್ರನೀತಿ, ಮನುಸ್ಮೃತಿ ಮುಂತಾದವುಗಳಲ್ಲಿ ರಾಜ್ಯಾಡಳಿತದ ಬಗ್ಗೆ ಸಾಕಷ್ಟು ವಿಚಾರಗಳಿವೆ. ರಾಮಾಯಣ ಮತ್ತು ಮಹಾಭಾರತದಂತಹ ಮಹಾಕಾವ್ಯಗಳಲ್ಲಿಯೂ ರಾಜಕೀಯ ಚಿಂತನೆಗಳಿವೆ. ಹಿಂದಿನ ಕಾಲದಲ್ಲಿ ರಾಜ್ಯಶಾಸ್ತ್ರಕ್ಕೆ ಅರ್ಥಶಾಸ್ತ್ರ, ರಾಜಧರ್ಮ, ನೀತಿಶಾಸ್ತ್ರ, ದಂಡನೀತಿ ಇವೇ ಮೊದಲಾದ ಹೆಸರುಗಳಿದ್ದವು.

### *ರಾಜ್ಯಶಾಸ್ತ್ರದ ಬೆಳವಣಿಗೆ:*

ಆಧುನಿಕ ಯುಗದಲ್ಲಿ ಫ್ರೆಂಚ್, ಜರ್ಮನ್ ಮತ್ತು ಆಂಗ್ಲ ವಿದ್ವಾಂಸರುಗಳು ರಾಜ್ಯಶಾಸ್ತ್ರದ ಬೆಳವಣಿಗೆಗೆ ಅಪಾರಕೊಡುಗೆ ನೀಡಿದ್ದಾರೆ. ಗಾಂಧೀಜಿ, ರಾಮ್ ಮನೋಹರ್ ಲೋಹಿಯಾ, ಜಯಪ್ರಕಾಶ್ ನಾರಾಯಣ, ಜವಹರಲಾಲ್ನೆಹರೂ, ಡಾ. ಬಿ. ಆರ್. ಅಂಬೇಡ್ಕರ್ ಮೊದಲಾದ ಭಾರತೀಯ ಚಿಂತಕರೂ ರಾಜ್ಯಶಾಸ್ತ್ರದ ಬೆಳವಣಿಗೆಗೆ ಹೊಸ ಕಾಯಕಲ್ಪ ನೀಡಿರುತ್ತಾರೆ. ಪ್ರಜಾಪ್ರಭುತ್ವ ಮತ್ತು ರಾಷ್ಟ್ರೀಯತೆಯ ಶಕ್ತಿಯುತ ಬೆಳವಣಿಗೆಯಿಂದಾಗಿ ರಾಜಕೀಯ ಪ್ರಜ್ಞೆ ಮತ್ತು ಜಾಗೃತಿ ಜನರ ಮನಸ್ಸಿನಲ್ಲಿ ಮೂಡತೊಡಗಿದೆ. ಇಂದು ರಾಜ್ಯಶಾಸ್ತ್ರವು ಕೇವಲ ಕೆಲವರ ಸ್ವತ್ತಾಗಿ ಉಳಿಯದೆ ಎಲ್ಲಾ ಜನರ ವಿಚಾರಧಾರೆಯಾಗಿದೆ.

## 1.4 ರಾಜ್ಯಶಾಸ್ತ್ರದ ಸ್ವರೂಪ:

ರಾಜ್ಯಶಾಸ್ತ್ರದ ಸ್ವರೂಪದ ಬಗ್ಗೆ ರಾಜನೀತಿಜ್ಞರಲ್ಲಿ ಒಮ್ಮತದ ಅಭಿಪ್ರಾಯವಿಲ್ಲ. ಮುಖ್ಯವಾಗಿ ರಾಜ್ಯಶಾಸ್ತ್ರವುಒಂದು ವಿಜ್ಞಾನವೋ ಅಥವಾ ಕಲೆಯೋ ಎನ್ನುವ ಬಗ್ಗೆ ಚರ್ಚೆ ಇದೆ. ಅನೇಕ ವರ್ಷಗಳ ಹಿಂದೆಯೇ ರಾಜ್ಯಶಾಸ್ತ್ರದಪಿತಾಮಹರಾದ ಅರಿಸ್ಟಾಟಲ್‌ರವರು ರಾಜ್ಯಶಾಸ್ತ್ರವನ್ನು 'ಶ್ರೇಷ್ಠ ವಿಜ್ಞಾನ' (Supreme Sciene) ಎಂದುಕರೆದಿದ್ದಾರೆ. ಸರ್ ಫೆಡ್ರಿಕ್, ಜಾನ್ ಸೀಲೆ, ಜೀನ್ ಬೋಡಿನ್, ಮೆಕೈವೆಲ್ಲಿ, ಹಾಬ್ಸ್, ಮೊಂಟೆಸ್ಕ್ಯೂ ಲಾರ್ಡ್ ಬ್ರೈಸ್ ಮುಂತಾದವರು 'ರಾಜ್ಯಶಾಸ್ತ್ರವನ್ನು ಒಂದು ವಿಜ್ಞಾನ' ವೆಂದು ಒಪ್ಪಿದ್ದಾರೆ. ಆದರೆ ರಾಜಶಾಸ್ತ್ರಜ್ಞರಾದ ಜೆ. ಎಸ್. ಮಿಲ್, ಹೆನ್ರಿ ಮೇಟ್ಲೆಂಡ್, ಜೆಮ್ಸ್‌ಬ್ರೈಸ್ ಮೊದಲಾದವರು 'ರಾಜ್ಯಶಾಸ್ತ್ರ ಒಂದು ವಿಜ್ಞಾನವಲ್ಲ' ಎಂದು ವಾದಿಸಿದ್ದಾರೆ.

### *ರಾಜ್ಯಶಾಸ್ತ್ರ ವಿಜ್ಞಾನವಲ್ಲ ಎಂಬ ವಾದ:*

ಕ್ರಮ-ಬದ್ಧ ವಿಜ್ಞಾನವು ವಿಷಯಗಳನ್ನು ಅಭ್ಯಾಸಮಾಡಿ ನಿಯಮಗಳನ್ನು ರಚಿಸುತ್ತದೆ. ಇಂತಹ ನಿಯಮಗಳು ಕರಾರುವಕ್ಕಾಗಿರುತ್ತವೆ. ಮುಂದೆ ಸಂಭವಿಸುವುದನ್ನು ನಿಶ್ಚಿತವಾಗಿ ಹೇಳಬಲ್ಲ ಶಕ್ತಿ ವಿಜ್ಞಾನಕ್ಕೆ ಇರುತ್ತವೆ. ಭೌತಶಾಸ್ತ್ರ, ರಸಾಯನಶಾಸ್ತ್ರ, ಗಣಿತಶಾಸ್ತ್ರ ಇವು ಇಂತಹ ವಿಜ್ಞಾನಗಳ ಸಾಲಿನಲ್ಲಿ ಸೇರಿವೆ. ರಾಜ್ಯಶಾಸ್ತ್ರವು ವಿಜ್ಞಾನವಲ್ಲ ಎಂಬ ವಾದಕ್ಕೆ ಈ ಕೆಳಕಂಡ ಅಂಶಗಳು ಪುಷ್ಟಿಕರಿಸುತ್ತವೆ.

1. ರಾಜ್ಯಶಾಸ್ತ್ರ ಅಧ್ಯಯನದ ವಸ್ತುವಿಷಯ, ಅಧ್ಯಯನದ ವಿಧಾನಗಳು ಮತ್ತು ಅದರ ಸಾಮಾನ್ಯ ತತ್ವಗಳ ನಿರೂಪಣೆ ಬಗ್ಗೆ ರಾಜಕೀಯ ಚಿಂತಕರಲ್ಲಿ ಒಮ್ಮತದ ಅಭಿಪ್ರಾಯವಿಲ್ಲ.
2. ರಾಜಕೀಯ ಪರಿಕಲ್ಪನೆಗಳಾದ ಪ್ರಜಾಪ್ರಭುತ್ವ, ನಿರಂಕುಶತ್ವ, ಸಮತಾವಾದ, ಸಾಮ್ರಾಜ್ಯಶಾಹಿ ನೀತಿ ಮುಂತಾದವುಗಳ ಬಗ್ಗೆ ಭೌತಶಾಸ್ತ್ರ ಮೊದಲಾದ ಪ್ರಾಕೃತಿಕ ವಿಜ್ಞಾನಗಳಲ್ಲಿರುವಂತೆ ಏಕಾಭಿಪ್ರಾಯವಿರುವುದಿಲ್ಲ.
3. ಸ್ವಾಭಾವಿಕ ವಿಜ್ಞಾನದಲ್ಲಿ ಪ್ರಯೋಗಗಳನ್ನು ಕೈಗೊಳ್ಳುವಂತೆ ರಾಜ್ಯಶಾಸ್ತ್ರದಲ್ಲಿ ಕೈಗೊಳ್ಳಲು ಸಾಧ್ಯವಿಲ್ಲ. ಇಲ್ಲಿ ವೈಜ್ಞಾನಿಕ ವಿಧಾನಗಳನ್ನು ಅಳವಡಿಸಿಕೊಂಡು ಅಧ್ಯಯನ ಮಾಡಲು ಕಷ್ಟವಾಗುತ್ತದೆ.
4. ರಾಜ್ಯಶಾಸ್ತ್ರವು ಮಾನವನ ರಾಜಕೀಯ ಚಟುವಟಿಕೆಗಳನ್ನು ಕುರಿತು ಅಧ್ಯಯನ ಮಾಡುತ್ತದೆ. ಮಾನವನ ವರ್ತನೆ ನಿರಂತರವಾಗಿ ಬದಲಾಗುತ್ತಿರುತ್ತದೆ. ಆದ್ದರಿಂದ ನಿಖರವಾಗಿ ಭವಿಷ್ಯತ್ತಿನ ರಾಜಕೀಯ ವಿದ್ಯಮಾನಗಳನ್ನು ಊಹಿಸಲು ಸಾಧ್ಯವಿಲ್ಲ, ಮಾತ್ರವಲ್ಲ ಖಚಿತ ತೀರ್ಮಾನಕ್ಕೆ ಬರುವುದು ಕಷ್ಟ ಸಾಧ್ಯ. ಈ ಎಲ್ಲಾ ಅಂಶಗಳನ್ನು ಪರಿಶೀಲಿಸಲಾಗಿ, ರಾಜ್ಯಶಾಸ್ತ್ರವು ನಿಸ್ಸಂಶಯವಾಗಿ ಒಂದು ಕಲೆಯಾಗಿದೆ. ಇದು ವಿಜ್ಞಾನವಲ್ಲ ಎಂಬ ಅಭಿಪ್ರಾಯ ಮೂಡುತ್ತದೆ. ಈ ಎಲ್ಲಾ ವಾದಗಳ ಹೊರತಾಗಿಯೂ ರಾಜ್ಯಶಾಸ್ತ್ರವನ್ನು ಇಂದಿಗೂ ವಿಜ್ಞಾನವೆಂದೇ ಪರಿಗಣಿಸಲಾಗುತ್ತಿದೆ. ಅನೇಕ ರಾಜನೀತಿಜ್ಞರು ಅದನ್ನು ವಿಜ್ಞಾನವೆನ್ನಲು ತಮ್ಮದೇ ಆದ ವಿಚಾರಗಳನ್ನು ಮಂಡಿಸಿದ್ದಾರೆ.

### *ರಾಜ್ಯಶಾಸ್ತ್ರ 'ವಿಜ್ಞಾನ' ವೆನ್ನುವುದರ ಪರ ವಾದ:*

**ರಾಜ್ಯಶಾಸ್ತ್ರವು ವಿಜ್ಞಾನ ಎಂಬ ವಾದಕ್ಕೆ ಈ ಕೆಳಕಂಡ ಅಂಶಗಳು ಪುಷ್ಟೀಕರಿಸುತ್ತವೆ.**

1. ರಾಜ್ಯಶಾಸ್ತ್ರ ಅಧ್ಯಯನ ವಿಧಾನದಲ್ಲಿಯೂ ಅವಲೋಕನ, ಮಾಹಿತಿ ಸಂಗ್ರಹಣೆ, ಪ್ರಾಯೋಗಿಕತೆ ಮತ್ತು ಸಂಶೋಧನೆಯ ಮೂಲಕ ಸತ್ಯಾನ್ವೇಷ ಮುಂತಾದವುಗಳನ್ನು ಅಳವಡಿಸಿಕೊಂಡು ಇದನ್ನು ವಿಜ್ಞಾನವನ್ನಾಗಿಸುವುದರಲ್ಲಿ ಯಾವುದೇ ಅಡಚಣೆ ಇರುವುದಿಲ್ಲ.
2. ರಾಜ್ಯಶಾಸ್ತ್ರದಲ್ಲಿ ಇಡೀ ವಿಶ್ವವೇ ಒಂದು ಪ್ರಯೋಗಾಲಯವಾಗಿರುವುದರಿಂದ ಇಲ್ಲಿಯೂ ಪ್ರಯೋಗಗಳನ್ನು ಕೈಗೊಂಡು ವ್ಯವಸ್ಥೆಯನ್ನು ಸುಧಾರಿಸಲು ಸಾಧ್ಯ.
3. ರಾಜ್ಯಶಾಸ್ತ್ರದಲ್ಲಿಯೂ ಭವಿಷ್ಯವನ್ನು ನುಡಿಯಲು ಸಾಧ್ಯ. ಉದಾಹರಣೆಗೆ ಚುನಾವಣಾ ಪೂರ್ವ ಮತ್ತು ಚುನಾವಣೋತ್ತರ ಸಮೀಕ್ಷೆಗಳನ್ನು ಕೈಗೊಳ್ಳುವ ಮೂಲಕ ಯಾವ ರಾಜಕೀಯ ಪಕ್ಷ ಅಧಿಕಾರಕ್ಕೆ ಬರಬಹುದು ಎಂಬುದನ್ನು ಊಹಿಸಲು ಸಾಧ್ಯ.

4. ರಾಜ್ಯಶಾಸ್ತ್ರವನ್ನು ವ್ಯವಸ್ಥಿತವಾಗಿ ಮತ್ತು ಕ್ರಮಬದ್ಧವಾಗಿ ಅಧ್ಯಯನ ಮಾಡುವುದರಿಂದ ಅದರ ಚಿಂತನೆಯನ್ನು ಉತ್ತಮವಾಗಿ ರೂಪುಗೊಳಿಸಿ ಸರ್ವಸಮ್ಮತ ಸತ್ಯವನ್ನು ಪಡೆಯಬಹುದಾಗಿದೆ.

ಈ ಮೇಲಿನ ಅಂಶಗಳನ್ನು ಪರಾಮರ್ಶಿಸಿದಾಗ, ರಾಜ್ಯಶಾಸ್ತ್ರವು ವಿಜ್ಞಾನವಾಗಿದ್ದು ಮಾನವನ ಜೀವನವನ್ನು ಹೆಚ್ಚು ಉದಾತ್ತವಾಗುವಂತೆ ಮಾಡುವಲ್ಲಿ ಸಹಾಯ ಮಾಡುತ್ತದೆ ಎನ್ನುವುದರಲ್ಲಿ ಸಂಶಯವಿಲ್ಲ.

## 1.5 ರಾಜ್ಯಶಾಸ್ತ್ರದ ಅಧ್ಯಯನ ವ್ಯಾಪ್ತಿ:

ವ್ಯಾಪ್ತಿ ಎಂದರೆ ಅಧ್ಯಯನದ ವಿಸ್ತಾರ, ಮಿತಿ ಅಥವಾ ಎಲ್ಲೆ ಎಂದರ್ಥ. ರಾಜ್ಯಶಾಸ್ತ್ರದ ವ್ಯಾಪ್ತಿಯ ಬಗ್ಗೆಯೂ ವಿದ್ವಾಂಸರಲ್ಲಿ ಒಮ್ಮತದ ಅಭಿಪ್ರಾಯವಿಲ್ಲ. ರಾಜಕೀಯ ಚಿಂತಕರಾದ ಗಾರ್ನರ್ ಬ್ಲಂಟ್‌ಷ್ಲಿ ಮೊದಲಾದವರ ಪ್ರಕಾರ ರಾಜ್ಯಶಾಸ್ತ್ರದ ಅಧ್ಯಯನವು ರಾಜ್ಯದ ಅಧ್ಯಯನಕ್ಕೆ ಮಾತ್ರ ಸೀಮಿತವಾಗಿದೆ. ಜಾನ್ ಸೀಲೆ, ಸ್ಟೀಫನ್ ಲೀಕಾಕ್ ಮೊದಲಾದ ಚಿಂತಕರು ರಾಜ್ಯಶಾಸ್ತ್ರವು ಸರ್ಕಾರದ ಬಗೆಗಿನ ಅಧ್ಯಯನವಾಗಿದೆ ಎಂದು ಅಭಿಪ್ರಾಯ ಪಟ್ಟಿರುತ್ತಾರೆ. ಗೆಟೆಲ್, ಗಿಲ್ ಕ್ರಿಸ್ಟ್, ಪಾಲ್ ಜೆನೆಟ್, ಹೇರಾಲ್ಡ್ ಜೆ ಲಾಸ್ಕಿ ಮುಂತಾದವರು ರಾಜ್ಯಶಾಸ್ತ್ರವು ರಾಜ್ಯ ಮತ್ತು ಸರ್ಕಾರಗಳೆರಡರ ಅಧ್ಯಯನಕ್ಕೆ ಸಂಬಂಧಿಸಿದ ವಿಷಯವಾಗಿದೆ ಎಂಬ ತೀರ್ಮಾನಕ್ಕೆ ಬದ್ಧರಾಗಿದ್ದಾರೆ.

ಯುನೆಸ್ಕೋ ಪ್ರಕಾರ ರಾಜ್ಯಶಾಸ್ತ್ರದ ವ್ಯಾಪ್ತಿ: 1948 ರಲ್ಲಿ ವಿಶ್ವಸಂಸ್ಥೆಯ ಶೈಕ್ಷಣಿಕ, ವೈಜ್ಞಾನಿಕ ಮತ್ತು ಸಾಂಸ್ಕೃತಿಕ ಸಂಸ್ಥೆ (UNESCO) ಆಶ್ರಯದಲ್ಲಿ ಜರುಗಿದ ಅಂತರರಾಷ್ಟ್ರೀಯ ರಾಜಕೀಯ ವಿಜ್ಞಾನಿಗಳ ಸಂಘದ ಸಭೆಯಲ್ಲಿ ರಾಜ್ಯಶಾಸ್ತ್ರದ ವ್ಯಾಪ್ತಿಯನ್ನು ಈ ಕೆಳಗಿನಂತೆ ಗುರುತಿಸಲಾಯಿತು.

1. ರಾಜಕೀಯ ಸಿದ್ಧಾಂತ ಮತ್ತು ರಾಜಕೀಯ ಚಿಂತನೆಯ ಇತಿಹಾಸ.
2. ಸರ್ಕಾರ, ಸಂವಿಧಾನ, ಸಾರ್ವಜನಿಕ ಆಡಳಿತ ಮತ್ತು ತುಲನಾತ್ಮಕ ರಾಜಕೀಯ ಸಂಸ್ಥೆಗಳು.
3. ರಾಜಕೀಯ ಪಕ್ಷಗಳು, ಒತ್ತಡ ಗುಂಪು ಮತ್ತು ಹಿತಾಸಕ್ತಿ ಗುಂಪುಗಳು ಸರ್ಕಾರ ಮತ್ತು ಆಡಳಿತದಲ್ಲಿ ಪ್ರಜೆಗಳ ಭಾಗವಹಿಸುವಿಕೆ ಹಾಗೂ ಸಾರ್ವಜನಿಕ ಅಭಿಪ್ರಾಯ.
4. ಅಂತರರಾಷ್ಟ್ರೀಯ ಸಂಬಂಧಗಳು, ಅಂತರರಾಷ್ಟ್ರೀಯ ಸಂಘಟನೆಗಳು ಮತ್ತು ಅಂತರರಾಷ್ಟ್ರೀಯ ಕಾನೂನು ಇವು ರಾಜ್ಯಶಾಸ್ತ್ರದ ವ್ಯಾಪ್ತಿಗೆ ಬರುತ್ತವೆ.

ಮೇಲಿನ ಅಂಶಗಳನ್ನು ಗಮನಿಸಿದಾಗ ರಾಜ್ಯಶಾಸ್ತ್ರದ ಅಧ್ಯಯನ ವ್ಯಾಪ್ತಿಯಲ್ಲಿ ಮಾನವನ ಸಮಸ್ತ ರಾಜಕೀಯ ಚಟುವಟಿಕೆಗಳೂ ಸೇರಿಕೊಂಡಿವೆ. ಪ್ರೊ. ಗುಡ್ನೋರವರು ಅಭಿಪ್ರಾಯಪಟ್ಟಿರುವಂತೆ ರಾಜ್ಯಶಾಸ್ತ್ರವು ರಾಜ್ಯದ ಇಚ್ಛೆಯ ಅಭಿವ್ಯಕ್ತಿ ಮತ್ತು ರಾಜ್ಯದ ಇಚ್ಛೆಯ ಅನುಷ್ಠಾನವೇ ಆಗಿದೆ.

## 1.6 ಸಮಕಾಲೀನ ಪ್ರಪಂಚದಲ್ಲಿ ರಾಜ್ಯಶಾಸ್ತ್ರ ಅಧ್ಯಯನದ ಮಹತ್ವ:

ಮಾನವ ಸಮಾಜಜೀವಿ ಮಾತ್ರವಲ್ಲದೆ ರಾಜಕೀಯಜೀವಿಯೂ ಆಗಿದ್ದಾನೆ. ರಾಜ್ಯಶಾಸ್ತ್ರದ ಅಧ್ಯಯನವು ಮಾನವ ಜೀವನದ ಒಂದು ಅವಿಭಾಜ್ಯ ಅಂಗವಾಗಿದೆ. ಬರ್ನಾರ್ಡ್ ಷಾ ಅಭಿಪ್ರಾಯಪಟ್ಟಿರುವಂತೆ 'ರಾಜ್ಯಶಾಸ್ತ್ರ ಒಂದರಿಂದಲೇ ನಾಗರಿಕತೆಯನ್ನು ರಕ್ಷಿಸಲು ಸಾಧ್ಯ'. ಆಧುನಿಕ ಪ್ರಜಾಸತ್ತಾತ್ಮಕ ರಾಷ್ಟ್ರಗಳಲ್ಲಿ ರಾಜ್ಯಶಾಸ್ತ್ರವು ಎಲ್ಲಾ ವರ್ಗದ ನಾಗರಿಕರಿಗೆ ಅತ್ಯಗತ್ಯವಾಗಿದೆ. ರಾಜ್ಯಶಾಸ್ತ್ರದ ಪ್ರಾಮುಖ್ಯತೆಯನ್ನು ಈ ಕೆಳಕಂಡ ಅಂಶಗಳಿಂದ ಮನವರಿಕೆ ಮಾಡಿಕೊಳ್ಳಬಹುದು.

### 1) ರಾಜಕೀಯ ಪ್ರಜ್ಞೆ ಮೂಡಿಸುತ್ತದೆ:

ಇಂದು ಪ್ರಜಾಪ್ರಭುತ್ವ ಯುಗವಾಗಿದ್ದು, ಪ್ರತಿಯೊಬ್ಬರು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ರಾಜಕಾರಣದಲ್ಲಿ ಪಾಲ್ಗೊಳ್ಳುತ್ತಿದ್ದಾರೆ. ರಾಜಕೀಯ ವಿದ್ಯಮಾನಗಳು, ಸರ್ಕಾರದ ಕಾರ್ಯಕಲಾಪಗಳು, ರಾಜಕೀಯ ಪಕ್ಷಗಳ ಧೋರಣೆಗಳು ಇತ್ಯಾದಿ ವಿಷಯಗಳ ಬಗ್ಗೆ ಎಲ್ಲರೂ ಆಸಕ್ತರಾಗಿರುತ್ತಾರೆ. ಪ್ರಜೆಗಳು ಮತದಾನದ ಹಕ್ಕನ್ನು ಹೊಂದಿದ್ದು ಸಮರ್ಥ ಅಭ್ಯರ್ಥಿಗಳನ್ನು ಚುನಾಯಿಸಲು ಉತ್ಸುಕರಾಗಿರುತ್ತಾರೆ. ಈ ಹಿನ್ನೆಲೆಯಲ್ಲಿ ರಾಜ್ಯಶಾಸ್ತ್ರದ ಅಧ್ಯಯನವು ಪ್ರಮುಖ ಪಾತ್ರ ವಹಿಸುತ್ತಿವೆ. ಪ್ರಜಾಪ್ರಭುತ್ವದ ಮೂಲ ತತ್ವಗಳನ್ನು ಅರಿತು ಜವಾಬ್ದಾರಿಯುತ ಮತ್ತು ಪ್ರಜ್ಞಾವಂತ ನಾಗರಿಕರಾಗಲು ರಾಜ್ಯಶಾಸ್ತ್ರದ ಅಧ್ಯಯನವು ಸಹಾಯ ಮಾಡುತ್ತದೆ.

### 2) ರಾಜ್ಯ ಮತ್ತು ಸರ್ಕಾರದ ಬಗ್ಗೆ ತಿಳುವಳಿಕೆ:

ರಾಜ್ಯಶಾಸ್ತ್ರದ ಅಧ್ಯಯನದಿಂದ ಪ್ರಜೆಗಳು ರಾಜ್ಯದ ಉಗಮ, ವಿಕಾಸ, ರಾಜ್ಯದ ಮೂಲಾಂಶಗಳು, ಗುರಿಮತ್ತು ಧ್ಯೇಯೋದ್ದೇಶಗಳನ್ನು ಅರಿಯುತ್ತಾರೆ. ಸರ್ಕಾರದ ವಿವಿಧ ಅಂಗಗಳು, ಅವುಗಳ ಕಾರ್ಯಗಳು ಹಾಗೂ ಆಡಳಿತ ವ್ಯವಸ್ಥೆಗಳ ಬಗ್ಗೆ ತಿಳಿಯುತ್ತಾರೆ.

### 3) ರಾಜಕೀಯ ಸಿದ್ಧಾಂತಗಳ ಬಗ್ಗೆ ಅರಿವು:

ರಾಜ್ಯಶಾಸ್ತ್ರದ ಅಧ್ಯಯನವು ರಾಜಕೀಯ ಸಿದ್ಧಾಂತಗಳಾದ ವ್ಯಕ್ತಿವಾದ, ಮಾರ್ಕ್ಸ್‌ವಾದ, ಸಮಾಜವಾದ, ಪ್ರಜಾಪ್ರಭುತ್ವ, ಮುಂತಾದವುಗಳ ಬಗ್ಗೆ ಅರಿವು ಮೂಡಿಸುತ್ತದೆ. ಬದಲಾಗುತ್ತಿರುವ ಸನ್ನಿವೇಶಗಳಿಗನುಗುಣವಾಗಿ ಈ ಸಿದ್ಧಾಂತಗಳು ಮನುಕುಲಕ್ಕೆ ಹೇಗೆ ಉಪಯುಕ್ತವಾಗುತ್ತಿವೆ ಎಂಬುದರ ಬಗ್ಗೆ ರಾಜ್ಯಶಾಸ್ತ್ರದ ಅಧ್ಯಯನದಿಂದ ಮಾತ್ರ ತಿಳಿಯಲು ಸಾಧ್ಯ. ಉದಾಹರಣೆಗೆ 1917 ರಲ್ಲಾದ ರಷ್ಯಾದ ಕ್ರಾಂತಿಗೆ ಕಾರ್ಲ್ ಮಾರ್ಕ್ಸ್‌ರವರ, ಸಮತಾ ಸಿದ್ಧಾಂತ ಕಾರಣವಾದುದು.

### 4) ತುಲನಾತ್ಮಕ ರಾಜಕೀಯದ ಬಗ್ಗೆ ತಿಳುವಳಿಕೆ:

ಸಮಕಾಲೀನ ಪ್ರಪಂಚವು ವೈವಿಧ್ಯಮಯ ರಾಜಕೀಯ ವ್ಯವಸ್ಥೆಗಳಿಂದ ಕೂಡಿದೆ. ಒಂದೊಂದು ದೇಶದಲ್ಲಿ ಒಂದೊಂದು ರೀತಿಯ ಸರ್ಕಾರ, ಸಂವಿಧಾನ, ಆಡಳಿತ ವಿಧಾನಗಳಿವೆ. ಇವುಗಳ ಬಗ್ಗೆ ತುಲನಾತ್ಮಕ ಅಧ್ಯಯನ ಮಾಡುವುದರಿಂದ ತಮ್ಮ ದೇಶದ

ನಾಗರಿಕ ಜೀವನಶೈಲಿಗೆ ಯೋಗ್ಯವಾದ ಸಂವಿಧಾನ, ಸರ್ಕಾರ ಹಾಗೂ ರಾಜಕೀಯ ವ್ಯವಸ್ಥೆ ಯಾವುದೆಂದು ನಿರ್ಧರಿಸಲು ಸಾಧ್ಯ.

**5) ರಾಜಕೀಯ ನಾಯಕರಿಗೆ ತರಬೇತಿ:**

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಜನಪ್ರತಿನಿಧಿಗಳ ಸರ್ಕಾರವಿರುತ್ತದೆ. ಪ್ರಜೆಗಳಿಂದ ಚುನಾಯಿತರಾದ ಪ್ರತಿನಿಧಿಗಳಿಗೆ ಶಾಸನಗಳನ್ನು ರೂಪಿಸಲು, ಅವುಗಳ ಬಗ್ಗೆ ಚರ್ಚಿಸಲು, ಸರ್ಕಾರದ ಯೋಜನೆಗಳನ್ನು ಅನುಷ್ಠಾನಕ್ಕೆ ತರಲು ಬೇಕಾದ ಜ್ಞಾನವನ್ನು ರಾಜ್ಯಶಾಸ್ತ್ರದ ಅಧ್ಯಯನ ಒದಗಿಸುತ್ತದೆ.

**6) ಅಧಿಕಾರದ ದುರುಪಯೋಗವನ್ನು ನಿಯಂತ್ರಿಸುತ್ತದೆ:**

ಕಲ್ಯಾಣರಾಜ್ಯದ ಪರಿಕಲ್ಪನೆಯೊಂದಿಗೆ ಅಸ್ತಿತ್ವಕ್ಕೆ ಬಂದಿರುವ ಆಧುನಿಕ ಪ್ರಜಾಸತ್ತಾತ್ಮಕ ರಾಜ್ಯಗಳು ಪ್ರಜೆಗಳಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸುವ ಮಹತ್ತರ ಜವಾಬ್ದಾರಿಯನ್ನು ಹೊಂದಿವೆ. ಇಂತಹ ಸಂದರ್ಭದಲ್ಲಿ ಸರ್ಕಾರದ ಅಧಿಕಾರವನ್ನು ನಿಯಂತ್ರಿಸುವ ಹೊಣೆಗಾರಿಕೆ ಪ್ರಜೆಗಳ ಮೇಲೂ ಇದೆ. ರಾಜ್ಯಶಾಸ್ತ್ರದ ಅಧ್ಯಯನದ ಮೂಲಕ ಅವರು ಈ ಅರಿವನ್ನು ಹೊಂದುವರು.

**7) ಅಂತರರಾಷ್ಟ್ರೀಯ ಸಂಬಂಧಗಳ ಬಗ್ಗೆ ಅರಿವು:**

ಸಮಕಾಲೀನ ವಿಶ್ವ ರಾಜಕೀಯ, ಅಂತರರಾಷ್ಟ್ರೀಯ ಕಾನೂನು, ಅಂತರರಾಷ್ಟ್ರೀಯ ಸಂಘಟನೆಗಳು ಮತ್ತು ರಾಷ್ಟ್ರ- ರಾಷ್ಟ್ರಗಳ ನಡುವಿನ ಸಂಬಂಧಗಳ ಬಗ್ಗೆ ರಾಜ್ಯಶಾಸ್ತ್ರದ ಅಧ್ಯಯನವು ಬೆಳಕು ಚೆಲ್ಲುತ್ತದೆ. ಮಹಾಯುದ್ಧಗಳ ಘನಘೋರ ಪರಿಣಾಮಗಳಿಂದ ತಲ್ಲಣಗೊಂಡ ಈ ಜಗತ್ತು ಮತ್ತೊಂದು ಯುದ್ಧ ಸಂಭವಿಸದಂತೆ ವಿಶ್ವಶಾಂತಿಗಾಗಿ ಹಾತೊರೆಯುತ್ತಿದೆ. ರಾಜ್ಯಶಾಸ್ತ್ರದ ಅಧ್ಯಯನವು ವಿಶ್ವಮಾನವತಾವಾದವನ್ನು ಬೆಳೆಸುತ್ತದೆ. ಉದಾರೀಕರಣ ಮತ್ತು ಜಾಗತೀಕರಣವನ್ನು ಬೆಂಬಲಿಸುತ್ತದೆ.

**8) ಆಡಳಿತ ಸೇವಾವರ್ಗಕ್ಕೆ ಮಾರ್ಗದರ್ಶನ:**

ಒಂದು ದೇಶದ ಪ್ರಗತಿ ಸರ್ಕಾರದ ನಾಲ್ಕನೇ ಅಂಗವೆಂದೇ ಪರಿಗಣಿಸಲ್ಪಟ್ಟಿರುವ ಆಡಳಿತ ಸೇವಾವರ್ಗದ ದಕ್ಷತೆ, ಕಾರ್ಯಕ್ಷಮತೆ ಮತ್ತು ನಿಷ್ಠೆಯ ಮೇಲೆ ಅವಲಂಬಿತವಾಗಿದೆ. ನಾಗರಿಕ ಸೇವಾವರ್ಗವು ಆಡಳಿತಾತ್ಮಕ ವಿಷಯಗಳ ಬಗ್ಗೆ ಹೆಚ್ಚಿನ ಜ್ಞಾನವನ್ನು ಪಡೆದುಕೊಂಡು ಸಮರ್ಪಕವಾಗಿ ಕಾರ್ಯ ನಿರ್ವಹಿಸಲು ರಾಜ್ಯಶಾಸ್ತ್ರದ ಅಧ್ಯಯನ ಸಹಕಾರಿಯಾಗಿದೆ.

ರಾಜ್ಯ ಶಾಸ್ತ್ರವು ಕೇವಲ ಇದ್ದುದನ್ನು ಇದ್ದಂತೆ ವಿವರಿಸುವ ಶಾಸ್ತ್ರವಲ್ಲ. ಅದು ನೀತಿ ಹಾಗೂ ಆದರ್ಶಗಳನ್ನು ನೀಡುವ ಶಾಸ್ತ್ರವೂ (Normative Science) ಆಗಿದೆ. ಮಾನವನು ಜೀವನದಲ್ಲಿ ಉದಾತ್ತತೆಯನ್ನು ಸಾಧಿಸಲು ಎಂತಹ ರಾಜಕೀಯ ಜೀವನವನ್ನು ರೂಪಿಸಿಕೊಳ್ಳಬೇಕು ಎಂಬುದನ್ನು ರಾಜನೀತಿಶಾಸ್ತ್ರ ತೋರಿಸಿಕೊಡುತ್ತದೆ. ಪ್ಲೇಟೋರ ಆದರ್ಶರಾಜ್ಯ ಸಿದ್ಧಾಂತ, ಕೌಟಿಲ್ಯರ ಸಪ್ತಾಂಗ ಸಿದ್ಧಾಂತ, ಜೆ. ಎಸ್. ಮಿಲ್‌ರವರ ಸ್ವಾತಂತ್ರ್ಯದ

ಸಿದ್ಧಾಂತ, ಗಾಂಧೀಜಿಯವರ ಅಹಿಂಸೆ ಮತ್ತು ಸತ್ಯಾಗ್ರಹದ ಸಿದ್ಧಾಂತಗಳೆಲ್ಲವೂ ರಾಷ್ಟ್ರ ಮತ್ತು ಮನುಕುಲದ ನಿರ್ಮಾಣಕ್ಕೆ ದಾರಿದೀಪಗಳಾಗಿವೆ.

ಹೀಗೆ ರಾಜ್ಯಶಾಸ್ತ್ರದ ಅಧ್ಯಯನವು ಮಾನವ ಕಲ್ಯಾಣಕ್ಕೆ ಅತ್ಯಂತ ಉಪಯುಕ್ತವಾಗಿದೆ ಎನ್ನುವುದರಲ್ಲಿ ಎರಡು ಮಾತಿಲ್ಲ.

## ಅಭ್ಯಾಸ

**I. ಒಂದು ವಾಕ್ಯದಲ್ಲಿ ಉತ್ತರಿಸಿ:**

1. ರಾಜ್ಯಶಾಸ್ತ್ರದ ಪಿತಾಮಹ ಯಾರು?
2. ರಾಜ್ಯಶಾಸ್ತ್ರದ ಮೂಲಪದ ಯಾವುದು?
3. ರಾಜ್ಯಶಾಸ್ತ್ರವನ್ನು 'ಶ್ರೇಷ್ಠವಿಜ್ಞಾನ' ಎಂದು ಕರೆದವರು ಯಾರು?
4. ಸಮತಾ-ವಾದದ ಪಿತಾಮಹ ಎಂದು ಯಾರನ್ನು ಕರೆಯಲಾಗುತ್ತದೆ?
5. ಅರ್ಥಶಾಸ್ತ್ರ ಕೃತಿಯನ್ನು ರಚಿಸಿದವರು ಯಾರು?

**II. ನಾಲ್ಕು ಉತ್ತರಗಳಲ್ಲಿ ಸರಿಯಾದುದನ್ನು ಆರಿಸಿ ಬರೆಯಿರಿ:**

1. ರಾಜ್ಯಶಾಸ್ತ್ರವನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡಿದವರಲ್ಲಿ ಇವರು ಮೊದಲಿಗರು ________ .
   a. ಭಾರತೀಯರು.
   b. ಫ್ರೆಂಚರು
   c. ಗ್ರೀಕರು
   d. ಡಚ್ಚರು.
2. 'ದಿ ಪಾಲಿಟಿಕ್ಸ್' ಎಂಬ ಕೃತಿಯನ್ನು ರಚಿಸಿದವರು _________.
   a. ಪ್ಲೇಟೋ
   b. ಅರಿಸ್ಟಾಟಲ್
   c. ಸಾಕ್ರೆಟೀಸ್
   d. ಮೆಕ್ಕೈವೆಲ್ಲಿ
3. 1948 ರಲ್ಲಿ ರಾಜಕೀಯ ವಿಜ್ಞಾನಿಗಳ ಸಮ್ಮೇಳನವು ಈ ನಗರದಲ್ಲಿ ನಡೆಯಿತು ________.
   a. ಪ್ಯಾರೀಸ್
   b. ಲಂಡನ್

c. ನ್ಯೂಯಾರ್ಕ್
d. ಡಿ ಅಥೆನ್ಸ್

4. ರಾಜ್ಯಶಾಸ್ತ್ರದ ಅಧ್ಯಯನ ರಾಜ್ಯದೊಡನೆ ಆರಂಭವಾಗಿ ರಾಜ್ಯದೊಡನೆಯೇ ಅಂತ್ಯವಾಗುತ್ತದೆಯೆಂದು ಹೇಳಿದವರು _______ .
   a. ಗ್ಯಾರೀಸ್
   b. ಪಾಲ್ ಜೆನೆಟ್
   c. ಗೆಟಲ್
   d. ಗಾರ್ನರ್
5. ರಾಜ್ಯಶಾಸ್ತ್ರವು ಕೇವಲ ಸರ್ಕಾರದ ಅಧ್ಯಯನವಾಗಿದೆ ಎಂದು ಹೇಳಿದವರಲ್ಲಿ ಇವರೂ ಒಬ್ಬರು _______ .

a. ಹೇರಾಲ್ಡ್ ಜೆ. ಲಾಸ್ಕಿ
b. ಜಾನ್ ಸೀಲೆ
c. ಬ್ಲಂಟ್‌ಷ್ಲಿ
d. ಗಿಲ್ ಕ್ರಿಸ್ಟ್
e.

**III. ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ:**

1. ರಾಜ್ಯಶಾಸ್ತ್ರವನ್ನು ವ್ಯಾಖ್ಯಾನಿಸಿ.
2. ಗ್ರೀಕ್ ನಗರ ರಾಜ್ಯಗಳ ಎರಡು ಲಕ್ಷಣಗಳನ್ನು ತಿಳಿಸಿ.
3. ರಾಜ್ಯಶಾಸ್ತ್ರ ಎಂದರೇನು?
4. ಗ್ರೀಕ್‌ನ 'ಬುದ್ಧಿವಂತ ತ್ರಿವಳಿಗಳು' ಎಂದು ಯಾರನ್ನು ಕರೆಯುತ್ತಾರೆ?
5. ಪ್ರಾಚೀನ ಭಾರತದಲ್ಲಿ ರಾಜ್ಯಶಾಸ್ತ್ರವನ್ನು ಯಾವ ಯಾವ ಹೆಸರುಗಳಿಂದ ಕರೆಯುತ್ತಿದ್ದರು?

**IV. ನಾಲ್ಕು ಅಥವಾ ಐದು ವಾಕ್ಯಗಳಲ್ಲಿ ಉತ್ತರಿಸಿ:**

1. ರಾಜ್ಯಶಾಸ್ತ್ರದ ಅರ್ಥವನ್ನು ಸಂಕ್ಷಿಪ್ತವಾಗಿ ವಿವರಿಸಿ,
2. ರಾಜ್ಯಶಾಸ್ತ್ರದ ಸ್ವರೂಪವನ್ನು ವಿವರಿಸಿ.
3. ರಾಜ್ಯಶಾಸ್ತ್ರವೊಂದು ವಿಜ್ಞಾನ- ಸಮರ್ಥಿಸಿ.
4. ರಾಜ್ಯಶಾಸ್ತ್ರ ಒಂದು ಕಲೆ - ಕಾರಣ ಕೊಡಿ.

**V. ಎಂಟು ಅಥವಾ ಹತ್ತು ವಾಕ್ಯಗಳಲ್ಲಿ ಉತ್ತರಿಸಿ:**

1. ರಾಜ್ಯಶಾಸ್ತ್ರದ ಹುಟ್ಟು ಮತ್ತು ಬೆಳವಣಿಗೆಗಳನ್ನು ವಿವರಿಸಿ.
2. ರಾಜ್ಯಶಾಸ್ತ್ರದ ವ್ಯಾಪ್ತಿಯನ್ನು ವಿವರಿಸಿ.
3. ಸಮಕಾಲೀನ ಪ್ರಪಂಚದಲ್ಲಿ ರಾಜ್ಯಶಾಸ್ತ್ರ ಅಧ್ಯಯನದ ಪ್ರಾಮುಖ್ಯತೆಯನ್ನು ವಿವರಿಸಿ.

**ಸಲಹಾತ್ಮಕ ಚಟುವಟಿಕೆಗಳು**

1. ಪ್ರಾಚೀನ ಗ್ರೀಕ್ ನಗರರಾಜ್ಯಗಳ ಬಗ್ಗೆ ಹೆಚ್ಚಿನ ಮಾಹಿತಿ ಸಂಗ್ರಹಿಸಿ.
2. ಸಾಕ್ರೆಟೀಸ್, ಪ್ಲೇಟೋ ಮತ್ತು ಅರಿಸ್ಟಾಟಲ್ ರವರ ಜೀವನಚರಿತ್ರೆಯನ್ನು ಕುರಿತು ಮಾಹಿತಿ ಸಂಗ್ರಹಿಸಿ.
3. ಕೌಟಿಲ್ಯನ ಅರ್ಥಶಾಸ್ತ್ರದ ‘ಸಪ್ತಾಂಗ ಸಿದ್ಧಾಂತ’ ದ ಬಗ್ಗೆ ಮಾಹಿತಿ ಸಂಗ್ರಹಿಸಿ.

# ಅಧ್ಯಾಯ- 2 ರಾಜ್ಯಶಾಸ್ತ್ರ ಮತ್ತು ಇತರೆ ಸಮಾಜವಿಜ್ಞಾನಗಳ ಸಂಬಂಧ (Relationship between Political Science and other Social Sciences)

**ಕಲಿಕಾ ಉದ್ದೇಶಗಳು:**

1. ಇತಿಹಾಸ ಮತ್ತು ರಾಜ್ಯಶಾಸ್ತ್ರದ ನಡುವಿನ ಸಂಬಂಧವನ್ನು ತಿಳಿಯುವುದು.
2. ಸಮಾಜಶಾಸ್ತ್ರ ಮತ್ತು ರಾಜ್ಯಶಾಸ್ತ್ರದ ನಡುವಿನ ಸಂಬಂಧವನ್ನು ಅರಿಯುವುದು.
3. ಅರ್ಥಶಾಸ್ತ್ರ ಮತ್ತು ರಾಜ್ಯಶಾಸ್ತ್ರಗಳು ಹೇಗೆ ಒಂದಕ್ಕೊಂದು ಪೂರಕವಾಗಿವೆ ಎಂದು ಮನನ ಮಾಡಿಕೊಳ್ಳುವುದು.
4. ನೀತಿಶಾಸ್ತ್ರ ಮತ್ತು ರಾಜ್ಯಶಾಸ್ತ್ರದ ನಡುವಿನ ಸಂಬಂಧವನ್ನು ಅರ್ಥೈಸಿಕೊಳ್ಳುವುದು.
5. ರಾಜ್ಯಶಾಸ್ತ್ರವು ಇತರ ಸಾಮಾಜಿಕ ಶಾಸ್ತ್ರಗಳೊಂದಿಗೆ ಹೊಂದಿರುವ ನಿಕಟ ಸಂಬಂಧವನ್ನು ಮೆಚ್ಚಿಕೊಳ್ಳುವುದು.

"ರಾಜ್ಯಶಾಸ್ತ್ರವಿಲ್ಲದ ಇತಿಹಾಸ ಫಲವಿಲ್ಲದ ವೃಕ್ಷದಂತೆ, ಇತಿಹಾಸವಿಲ್ಲದ ರಾಜ್ಯಶಾಸ್ತ್ರ ಬೇರಿಲ್ಲದ ಮರದಂತೆ" - **ಸರ್ ಜಾನ್‌ಸೀಲೆ.**

"ಇತಿಹಾಸವು ಹಿಂದಿನ ರಾಜಕೀಯ, ರಾಜಕೀಯವು ಇಂದಿನ ಇತಿಹಾಸ" - **ಫ್ರಿಮನ್.**

## ಪೀಠಿಕೆ:

ರಾಜ್ಯಶಾಸ್ತ್ರವು ಒಂದು ಸಾಮಾಜಿಕ ಶಾಸ್ತ್ರವಾಗಿದೆ. ರಾಜ್ಯಶಾಸ್ತ್ರಕ್ಕೂ ಇತರ ಸಾಮಾಜಿಕ ಶಾಸ್ತ್ರಗಳಾದ ಇತಿಹಾಸ, ಸಮಾಜಶಾಸ್ತ್ರ, ಅರ್ಥಶಾಸ್ತ್ರ, ನೀತಿಶಾಸ್ತ್ರ ಮುಂತಾದವುಗಳಿಗೂ ನಿಕಟ ಸಂಬಂಧವಿದೆ. ಸಾಮಾಜಿಕ ಶಾಸ್ತ್ರಗಳು ಒಂದಕ್ಕೊಂದು ಪೂರಕವಾಗಿದ್ದು ಮಾನವ ಜೀವನವನ್ನು ಸಂಪೂರ್ಣವಾಗಿ ಅರ್ಥಮಾಡಿಕೊಳ್ಳಲು ಸಹಾಯಕವಾಗಿವೆ. ಆದರೆ ಎಲ್ಲ ಸಾಮಾಜಿಕ ಶಾಸ್ತ್ರಗಳನ್ನೂ ಒಟ್ಟಿಗೆ ಅಭ್ಯಾಸ ಮಾಡಲು ಸಾಧ್ಯವಿಲ್ಲ. ಅಭ್ಯಾಸದ ಅನುಕೂಲತೆಗಾಗಿ ಮಾನವನ ವಿವಿಧ ಚಟುವಟಿಕೆಗಳನ್ನು ಪ್ರತ್ಯೇಕವಾಗಿ ಅವಲೋಕಿಸಬೇಕಾಗುತ್ತದೆ. ಒಂದು ಸಾಮಾಜಿಕಶಾಸ್ತ್ರದ ಅಧ್ಯಯನವು ಇತರ ಸಾಮಾಜಿಕ ಶಾಸ್ತ್ರಗಳ ಬೆಳವಣಿಗೆಗೆ ಪೂರಕವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ರಾಜ್ಯಶಾಸ್ತ್ರಕ್ಕೂ ಇತರೆ ಸಾಮಾಜಿಕ ಶಾಸ್ತ್ರಗಳಿಗೂ ಇರುವ ಸಂಬಂಧವನ್ನು ಇಲ್ಲಿ ವಿವರಿಸಲಾಗಿದೆ.

## ರಾಜ್ಯಶಾಸ್ತ್ರ ಮತ್ತು ಸಾಮಾಜಿಕಶಾಸ್ತ್ರಗಳ ನಡುವಿನ ಸಂಬಂಧ:

ರಾಜ್ಯಶಾಸ್ತ್ರ ಮತ್ತು ಇತಿಹಾಸ (Political Science and History)

ರಾಜ್ಯಶಾಸ್ತ್ರ ಮತ್ತು ಸಮಾಜಶಾಸ್ತ್ರ (Political Science and Sociology)

ರಾಜ್ಯಶಾಸ್ತ್ರ ಮತ್ತು ಅರ್ಥಶಾಸ್ತ್ರ (Political Science and Economics)
ರಾಜ್ಯಶಾಸ್ತ್ರ ಮತ್ತು ನೀತಿಶಾಸ್ತ್ರ (Political Science and Ethics)

### *1) ರಾಜ್ಯಶಾಸ್ತ್ರ ಮತ್ತು ಇತಿಹಾಸ (Political Science and History):*

ರಾಷ್ಟ್ರ ಮತ್ತು ರಾಜಕೀಯ ಸಂಸ್ಥೆಗಳು ಇತಿಹಾಸದ ಫಲವಾಗಿವೆ. ಪ್ರತಿಯೊಂದು ರಾಜಕೀಯ ಸಂಸ್ಥೆಗೂ ಐತಿಹಾಸಿಕ ಹಿನ್ನೆಲೆ ಇರುತ್ತದೆ. ಇತಿಹಾಸವು ರಾಜ್ಯಶಾಸ್ತ್ರಕ್ಕೆ ಒಂದು ಪ್ರಯೋಗಾಲಯವಿದ್ದಂತೆ. ವಿಧ ವಿಧವಾದ ಸರ್ಕಾರಗಳ ಆಡಳಿತ, ರಾಜಕೀಯ ಜೀವನ ಇವುಗಳ ಬಗ್ಗೆ ಇತಿಹಾಸವು ನಮಗೆ ಮಾಹಿತಿ ನೀಡುತ್ತದೆ. ಇಂತಹ ಮಾಹಿತಿಯ ಆಧಾರವಿಲ್ಲದಿದ್ದಲ್ಲಿ ರಾಜ್ಯಶಾಸ್ತ್ರವನ್ನು ಅಭ್ಯಾಸ ಮಾಡಲು ಸಾಧ್ಯವಿಲ್ಲ. ಇಂದಿನ ರಾಜಕೀಯ ಜೀವನವನ್ನು ಅರ್ಥಮಾಡಿಕೊಳ್ಳಬೇಕಾದರೆ ಹಿಂದಿನ ಇತಿಹಾಸದ ಪರಿಚಯ ಬೇಕಾಗುತ್ತದೆ. ಅದೇ ರೀತಿ ಇಂದಿನ ರಾಜಕೀಯವೇ ನಾಳಿನ ಇತಿಹಾಸವಾಗಿರುತ್ತದೆ. ತಪ್ಪುಗಳನ್ನು ಸರಿಪಡಿಸಿಕೊಳ್ಳಲು ಇವು ಒಂದಕ್ಕೊಂದು ಪೂರಕ.

ರಾಜಕೀಯ ಜೀವನದ ಪರಿಚಯ ನೀಡದ ಇತಿಹಾಸವು ಇತಿಹಾಸವೇ ಅಲ್ಲ. ಚಿಂತಕರಾದ ಸರ್ ಜಾನ್ ಸೀಲೆಯವರು "ರಾಜ್ಯಶಾಸ್ತ್ರವಿಲ್ಲದ ಇತಿಹಾಸ ಫಲವಿಲ್ಲದ ವೃಕ್ಷದಂತೆ, ಇತಿಹಾಸವಿಲ್ಲದ ರಾಜ್ಯಶಾಸ್ತ್ರ ಬೇರಿಲ್ಲದ ಮರದಂತೆ" ಎಂದು ಅಭಿಪ್ರಾಯಪಟ್ಟಿರುತ್ತಾರೆ.

ರಾಜ್ಯಶಾಸ್ತ್ರವು ತನ್ನ ಮೂಲವಸ್ತುವಿಗೆ ಇತಿಹಾಸವನ್ನು ಅವಲಂಬಿಸಿದ್ದರೂ ಅದು ಕೇವಲ ಒಂದು ಅಂಶವಾಗಿರುತ್ತದೆಯೇ ಹೊರತು ಪೂರ್ಣವಲ್ಲ. ಇತಿಹಾಸದ ಎಲ್ಲ ವಿಷಯಗಳೂ ರಾಜ್ಯಶಾಸ್ತ್ರಕ್ಕೆ ಉಪಯುಕ್ತವಲ್ಲ. ಯಾವ ವಿಷಯಗಳು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ರಾಜ್ಯವನ್ನು ಕುರಿತು ಅಧ್ಯಯನ ಮಾಡಲು ನೆರವಾಗುವ ತತ್ವಗಳು ಮಾತ್ರ ಉಪಯುಕ್ತವಾದವು. ಇತಿಹಾಸದಲ್ಲಿ ಬರುವ ಬಹುಭಾಗ ಎಂದರೆ ಕಲೆ, ವಿಜ್ಞಾನ, ವಾಸ್ತುಶಿಲ್ಪ, ಸಂಶೋಧನೆ, ಭಾಷೆ, ಉಡುಪು, ಮತೀಯ ಘರ್ಷಣೆ ಇತ್ಯಾದಿ ವಿಷಯಗಳು ರಾಜ್ಯಶಾಸ್ತ್ರಕ್ಕೆ ಅತಿ ಮುಖ್ಯ ಅಂಶಗಳಾಗಿರುವುದಿಲ್ಲ. ಹೀಗೆ ರಾಜ್ಯಶಾಸ್ತ್ರವು ಇತಿಹಾಸದಲ್ಲಿ ತನಗೆ ಅಗತ್ಯವಾದ ವಿಷಯಗಳನ್ನು ಆರಿಸಿಕೊಳ್ಳುತ್ತದೆ.

ರಾಜನೀತಿಜ್ಞರಾದ ಪಿಜ್‌ನಿಕ್ ಹೇಳುವಂತೆ "ಪ್ರತ್ಯಕ್ಷ ಅಂಶಗಳನ್ನು ಮಂಡಿಸುವುದು ಇತಿಹಾಸದ ಪ್ರಧಾನ ಅಂಶವಾದರೆ, ಪರೋಕ್ಷ ಅಂಶಗಳನ್ನು ತತ್ವರೂಪದಲ್ಲಿ ಮಂಡಿಸುವುದು ರಾಜ್ಯಶಾಸ್ತ್ರದ ಪ್ರಧಾನ ಉದ್ದೇಶವಾಗಿದೆ". ಉದಾಹರಣೆಗೆ ಅಥೆನ್ಸಿನಲ್ಲೂ, ಇಂಗ್ಲೆಂಡಿನಲ್ಲೂ ನಡೆದ ರಾಜಕೀಯ ಬದಲಾವಣೆಗಳ ರೀತಿಯ ಕುರಿತು ರಾಜ್ಯಶಾಸ್ತ್ರ ಆದ್ಯತೆ ನೀಡುವುದಿಲ್ಲ ಆದರೆ ಬದಲಾವಣೆಗಳಲ್ಲಿ ವ್ಯಕ್ತವಾಗುವ ಸಾಮಾನ್ಯ ತತ್ವಗಳು ಅಥವಾ ಅವುಗಳ ಪ್ರವೃತ್ತಿಯ ಲಕ್ಷಣಗಳ ಬಗ್ಗೆ ವಿಮರ್ಶೆ ಮಾಡುತ್ತದೆ. ಆದುದರಿಂದ ರಾಜ್ಯಶಾಸ್ತ್ರ ಮತ್ತು ಇತಿಹಾಸಗಳಿಗೆ ನಿಕಟ ಸಂಬಂಧವಿದ್ದರೂ ಅವುಗಳ ವಿಷಯಗಳು ಬೇರೆ ಬೇರೆಯಾಗಿವೆ ಎಂದು ಹೇಳಬಹುದು.

### *2) ರಾಜ್ಯಶಾಸ್ತ್ರ ಮತ್ತು ಸಮಾಜಶಾಸ್ತ್ರ (Political Science and Sociology):*

ಸಮಾಜಶಾಸ್ತ್ರವು ಎಲ್ಲ ಸಮಾಜವಿಜ್ಞಾನಗಳ ತಾಯಿ. ಇದರಲ್ಲಿ ನಾವು ಮಾನವನ ಸಾಮಾಜಿಕ ಜೀವನದ ಸಂಬಂಧಗಳು ಹಾಗೂ ಚಟುವಟಿಕೆಗಳನ್ನು ಅಭ್ಯಾಸ ಮಾಡುತ್ತೇವೆ. ಸಾಮಾಜಿಕ ಗುಂಪುಗಳ ಹುಟ್ಟು, ಬೆಳವಣಿಗೆ, ಸ್ವಭಾವ, ಕಾರ್ಯ ಮುಂತಾದವುಗಳು ಇದರ ಅಧ್ಯಯನ ವಿಷಯಗಳಾಗಿವೆ. ಆದರೆ ರಾಜ್ಯಶಾಸ್ತ್ರವು ಮಾನವನ ರಾಜಕೀಯ ಚಟುವಟಿಕೆಗಳ ಬಗ್ಗೆ ಮಾತ್ರ ಅಭ್ಯಾಸ ಮಾಡುತ್ತದೆ. ಆದುದರಿಂದ ರಾಜ್ಯಶಾಸ್ತ್ರದ ವ್ಯಾಪ್ತಿಯು ಸಮಾಜಶಾಸ್ತ್ರದ ವ್ಯಾಪ್ತಿಯಷ್ಟು ವಿಶಾಲವಾದುದಲ್ಲ.

ಸಮಾಜಶಾಸ್ತ್ರವು ರಾಜ್ಯಶಾಸ್ತ್ರದಿಂದ ರಾಜಕೀಯ ಸಂಘ ಸಂಸ್ಥೆಗಳ ಕಾರ್ಯಗಳು, ಸಂಘಟನೆ ಮುಂತಾದ ವಿಷಯಗಳನ್ನು ಆಯ್ದುಕೊಳ್ಳುತ್ತದೆ. ಈ ಕಾರಣದಿಂದ ರಾಜ್ಯಶಾಸ್ತ್ರಜ್ಞರಿಗೆ ಸಮಾಜಶಾಸ್ತ್ರದ ಅರಿವೂ ಇರಬೇಕಾಗುತ್ತದೆ. ಉದಾಹರಣೆಗೆ ಜಾತಿ ಗಲಭೆ ಅಥವಾ ಕೋಮು ಗಲಭೆ ಸಂಭವಿಸಿದರೆ ಮೇಲ್ನೋಟಕ್ಕೆ ಅದು ಸಮಾಜಶಾಸ್ತ್ರಕ್ಕೆ ಸಂಬಂಧಿಸಿದ ಘಟನೆಯಾಗಿರುತ್ತದೆ. ಆದರೆ ಇದರ ಹಿಂದೆ ಇರುವ ಸರ್ಕಾರದ ಧೋರಣೆ, ಆಡಳಿತದ ವೈಫಲ್ಯ ಇತ್ಯಾದಿ ಅಂಶಗಳು ರಾಜ್ಯಶಾಸ್ತ್ರಕ್ಕೆ ಸಂಬಂಧಿಸಿದ ವಿಷಯಗಳಾಗಿರುತ್ತವೆ. ಇಂತಹ ಗಲಭೆಗಳು ಸಂಭವಿಸದಂತೆ ಸೂಕ್ತ ಕ್ರಮ ತೆಗೆದುಕೊಳ್ಳುವುದು ರಾಜಕೀಯ ಮುಖ್ಯಸ್ಥರ ಹೊಣೆಯಾಗಿರುತ್ತದೆ. ಇದೇ ರೀತಿ ಕ್ರಾಂತಿಗಳು, ರಾಜಕೀಯ ಪಕ್ಷಗಳು ಮುಂತಾದ ವಿಷಯಗಳು ಸಮಾಜಶಾಸ್ತ್ರ ಹಾಗೂ ರಾಜ್ಯಶಾಸ್ತ್ರಗಳೆರಡರ ವ್ಯಾಪ್ತಿಗೂ ಒಳಪಡುತ್ತವೆ. ಹೀಗೆ ಸಮಾಜಶಾಸ್ತ್ರ ಹಾಗೂ ರಾಜ್ಯಶಾಸ್ತ್ರಗಳೆರಡರ ನಡುವೆ ನಿಕಟವಾದ ಸಂಬಂಧವಿದೆ.

ಸಮಾಜಶಾಸ್ತ್ರವು ಸಮಾಜದ ಹಿಂದಿನ ಮತ್ತು ಇಂದಿನ ಸ್ಥಿತಿಗಳ ಬಗ್ಗೆ ಮಾತ್ರ ವಿಚಾರ ಮಾಡುತ್ತದೆ. ಮುಂದೆ ಸಮಾಜವು ಯಾವ ಮಾರ್ಪಾಡನ್ನು ಹೊಂದುತ್ತದೆ ಎಂಬುದನ್ನು ಅದು ನಮಗೆ ತಿಳಿಸುವುದಿಲ್ಲ. ಆದರೆ ರಾಜ್ಯಶಾಸ್ತ್ರದಲ್ಲಿ ಹಿಂದಿನ ಮತ್ತು ಇಂದಿನ ರಾಜಕೀಯ ಜೀವನದ ಬಗ್ಗೆ ನಾವು ಅಭ್ಯಾಸ ಮಾಡಿ, ಮುಂದೆ ಅದು ಯಾವ ಬದಲಾವಣೆಗಳನ್ನು ಹೊಂದಬಹುದು ಎಂಬುದನ್ನು ವಿಚಾರ ಮಾಡುತ್ತೇವೆ. ಹೀಗೆ ಇವೆರಡರ ನಡುವೆ ಸಂಬಂಧದ ಜೊತೆಗೆ ಅನೇಕ ವ್ಯತ್ಯಾಸಗಳಿರುವುದನ್ನು ನಾವು ಗಮನಿಸಬಹುದು.

### *3) ರಾಜ್ಯಶಾಸ್ತ್ರ ಮತ್ತು ಅರ್ಥಶಾಸ್ತ್ರ (Political Science and Economics):*

ಅರ್ಥಶಾಸ್ತ್ರವು ಸಾಮಾಜಿಕ ಉದ್ದೇಶಗಳನ್ನು ಸಾಕಾರಗೊಳಿಸುವ ರಾಜ್ಯಶಾಸ್ತ್ರದ ಸಾಧನವಾಗಿದೆ. ಆಡಂಸ್ಮಿತ್ ರವರ ಪ್ರಕಾರ 'ರಾಷ್ಟ್ರದ ಸಂಪತ್ತನ್ನು ಹೆಚ್ಚಿಸುವುದೇ ಅರ್ಥಶಾಸ್ತ್ರದ ಗುರಿ'. ಆದರೆ ಈಗಿನ ಅರ್ಥಶಾಸ್ತ್ರಜ್ಞರು ಈ ಅಭಿಪ್ರಾಯವನ್ನು ಒಪ್ಪಿಕೊಳ್ಳುವುದಿಲ್ಲ. ಆಲ್‌ಫ್ರೆಡ್ ಮಾರ್ಷೆಲ್‌ರವರು 'ಮಾನವ ಕಲ್ಯಾಣವೇ ಅರ್ಥಶಾಸ್ತ್ರದ ಗುರಿ' ಎಂದಿದ್ದಾರೆ. ಅರ್ಥಶಾಸ್ತ್ರವು ಮಾನವನ ಆರ್ಥಿಕ ಜೀವನದ ಬಗ್ಗೆ ಕೈಗೊಂಡ ಅಭ್ಯಾಸವಾಗಿದೆ ಎಂಬುದು

ಇವರ ಅಭಿಪ್ರಾಯ. ಸಂಪತ್ತಿನ ಉತ್ಪಾದನೆ, ವಿತರಣೆ, ಬಳಕೆ ಮುಂತಾದವುಗಳೇ ಇದರ ಅಧ್ಯಯನದ ವಿಷಯಗಳು.

ಅರ್ಥಶಾಸ್ತ್ರವು ಮಾನವನ ಆರ್ಥಿಕ ಜೀವನದ ಬಗ್ಗೆ ವಿವರಿಸುತ್ತದೆ. ರಾಜ್ಯಶಾಸ್ತ್ರವು ಮಾನವನ ರಾಜಕೀಯ ಜೀವನದ ಬಗ್ಗೆ ವಿವರಣೆ ನೀಡುತ್ತದೆ. ಎರಡು ಶಾಸ್ತ್ರಗಳ ಕೇಂದ್ರವು ಮಾನವನಾಗಿದ್ದಾನೆ. ಮಾನವ ಕಲ್ಯಾಣವೇ ಇವೆರಡರ ಗುರಿಯಾಗಿದೆ. ರಾಷ್ಟ್ರವು ಜನತೆಯ ಆರ್ಥಿಕ ಪ್ರಗತಿಗೆ ಅವಶ್ಯವಾದ ಹಲವು ಕಾರ್ಯಕ್ರಮಗಳನ್ನು ಕೈಗೊಳ್ಳಬೇಕಾಗುತ್ತದೆ. ಆದ್ದರಿಂದ ರಾಜ್ಯಶಾಸ್ತ್ರಜ್ಞನಿಗೆ ಅರ್ಥಶಾಸ್ತ್ರದ ಜ್ಞಾನವೂ ಇರಬೇಕಾಗುತ್ತದೆ. ಉತ್ತಮವಾದ ರಾಷ್ಟ್ರವನ್ನು ಕಟ್ಟಬೇಕಾದರೆ ಆ ರಾಷ್ಟ್ರದಲ್ಲಿರುವ ಜನರ ಜೀವನಮಟ್ಟವು ಉತ್ತಮವಾಗಿರಬೇಕಾಗುತ್ತದೆ. ಬಡತನವು ರಾಷ್ಟ್ರ ರಾಜಕಾರಣದ ಮೇಲೆ ಗಂಭೀರ ಪರಿಣಾಮವನ್ನು ಬೀರಬಲ್ಲದು.

ರಾಷ್ಟ್ರವೊಂದರ ಅರ್ಥವ್ಯವಸ್ಥೆ ಉತ್ತಮವಾಗಿರಬೇಕಾದರೆ ಸರ್ಕಾರವು ವಸ್ತುಗಳ ಉತ್ಪಾದನೆ ಮತ್ತು ಹಂಚಿಕೆಗಳ ಬಗ್ಗೆ ಸಾಕಷ್ಟು ಗಮನ ನೀಡಬೇಕಾಗುತ್ತದೆ. ಉತ್ಪಾದನೆಯನ್ನು ಹೆಚ್ಚಿಸಲು, ಬೆಲೆ ಏರಿಕೆಯನ್ನು ತಡೆಗಟ್ಟಲು, ಉದ್ಯೋಗ ಅವಕಾಶಗಳನ್ನು ಹೆಚ್ಚಿಸಲು, ಬಡವರ, ಹಿಂದುಳಿದವರ, ಮಹಿಳೆಯರ ಸ್ಥಿತಿ ಸುಧಾರಿಸಲು ಸರ್ಕಾರವು ಅಗತ್ಯ ಕ್ರಮಗಳನ್ನು ಕೈಗೊಳ್ಳಬೇಕಾಗುತ್ತದೆ. ಇದಕ್ಕಾಗಿ ಸೂಕ್ತ ಧೋರಣೆಗಳನ್ನು ರೂಪಿಸಬೇಕಾಗುತ್ತದೆ. ಅಸಮಾನತೆಯನ್ನು ಹೋಗಲಾಡಿಸಿ ರಾಷ್ಟ್ರದ ಸಂಪತ್ತು ಸಮವಾಗಿ ಹಂಚಿಕೆಯಾಗುವಂತೆ ನೋಡಿಕೊಳ್ಳಲು ಸರ್ಕಾರವು ಪ್ರಯತ್ನಿಸುತ್ತದೆ. ಒಟ್ಟಿನಲ್ಲಿ ರಾಷ್ಟ್ರದ ರಾಜಕೀಯ ಜೀವನವು ಆರ್ಥಿಕ ಜೀವನವನ್ನು ಅವಲಂಬಿಸಿರುತ್ತದೆ. ಹೀಗೆ ರಾಜ್ಯಶಾಸ್ತ್ರಕ್ಕೂ ಮತ್ತು ಅರ್ಥಶಾಸ್ತ್ರಕ್ಕೂ ಪರಸ್ಪರ ಸಂಬಂಧವಿದೆ. ಇದಕ್ಕಾಗಿ ಇಂದಿನ ರಾಷ್ಟ್ರಗಳು ಆರ್ಥಿಕ ಯೋಜನೆಗಳನ್ನು ರೂಪಿಸಿಕೊಂಡು ಅವುಗಳನ್ನು ಕಾರ್ಯಗತಗೊಳಿಸುತ್ತಿವೆ.

### *4) ರಾಜ್ಯಶಾಸ್ತ್ರ ಮತ್ತು ನೀತಿಶಾಸ್ತ್ರ (Political Science and Ethics):*

ನೀತಿಶಾಸ್ತ್ರವು ಮಾನವನ ನೈತಿಕ ಜೀವನಕ್ಕೆ ಸಂಬಂಧಿಸಿದ ಶಾಸ್ತ್ರವಾಗಿದೆ. ಸಮಾಜದಲ್ಲಿರುವ ಮಾನವನು ಹೇಗೆ ವರ್ತಿಸಬೇಕು ಎಂಬುದೇ ಈ ಶಾಸ್ತ್ರದ ಮುಖ್ಯ ವಿಷಯವಾಗಿದೆ. ಮಾನವನ ವರ್ತನೆಯಲ್ಲಿ ಯಾವುದು ಸರಿ, ಯಾವುದು ತಪ್ಪು ಎಂಬುದನ್ನು ಈ ಶಾಸ್ತ್ರ ವಿವರಿಸುತ್ತದೆ. ರಾಜ್ಯಶಾಸ್ತ್ರವು ಮಾನವನ ರಾಜಕೀಯ ಜೀವನ ಹೇಗಿರಬೇಕು. ಯಾವುದು ಸರಿಯಾದ ಮಾರ್ಗ ಮತ್ತು ಯಾವುದು ತಪ್ಪು ಮಾರ್ಗ ಎಂಬುದನ್ನು ತೋರಿಸಿಕೊಡುತ್ತದೆ. ಸ್ವಾಮಿ ವಿವೇಕಾನಂದರು ‘ನನ್ನ ಮಕ್ಕಳೆ, ಇದನ್ನು ನೀವು ನೆನಪಿನಲ್ಲಿಡಿ: ಹೇಡಿಗಳು ಮತ್ತು ದುರ್ಬಲರು ಮಾತ್ರ ಪಾಪ ಮಾಡುವರು, ಸುಳ್ಳು ಹೇಳುವರು, ಧೀರರು ಯಾವಾಗಲೂ ನೀತಿವಂತರು. ನೀತಿವಂತರಾಗಲು ಪ್ರಯತ್ನಿಸಿ ಎಲ್ಲರಿಗೂ ಸಹಾನುಭೂತಿ ತೋರಿ’ ಎಂದು ಕರೆ ನೀಡಿರುತ್ತಾರೆ.

ಮಾನವನ ರಾಜಕೀಯ ಜೀವನವು ಸುಗಮವಾಗಿ ನಡೆಯುವಂತೆ ರಾಷ್ಟ್ರವು ವ್ಯವಸ್ಥೆ ಮಾಡುತ್ತದೆ. ಅನೈತಿಕ ವ್ಯವಹಾರಗಳನ್ನು ತಡೆಗಟ್ಟುವುದು ರಾಷ್ಟ್ರದ ಹೊಣೆ. ಇದಕ್ಕೆ

ಅವಶ್ಯವಾದ ಕಾನೂನುಗಳನ್ನು ರಾಷ್ಟ್ರವು ರೂಪಿಸುತ್ತದೆ. ಅನೈತಿಕ ವ್ಯವಹಾರಗಳಲ್ಲಿ ತೊಡಗಿದವರನ್ನು ಶಿಕ್ಷಿಸುವ ಅಧಿಕಾರವು ರಾಷ್ಟ್ರಕ್ಕಿದೆ. ನೀತಿಶಾಸ್ತ್ರವು ಮಾನವನ ಆಂತರಿಕ ವರ್ತನೆಗೆ ಮಾತ್ರ ಸಂಬಂಧಿಸಿರುತ್ತದೆ. ಈ ಶಾಸ್ತ್ರವು ಮಾನವನನ್ನು ಮಾನವನಂತೆ ಅಭ್ಯಾಸ ಮಾಡುತ್ತದೆ. ಆದರೆ ರಾಜ್ಯಶಾಸ್ತ್ರವು ಮಾನವನು ರಾಷ್ಟ್ರದ ಪ್ರಜೆಯೆಂಬ ದೃಷ್ಟಿಯಿಂದ ಅಭ್ಯಾಸ ಮಾಡುತ್ತದೆ.

ಹೀಗೆ ರಾಜ್ಯಶಾಸ್ತ್ರ ಮತ್ತು ನೀತಿಶಾಸ್ತ್ರದ ದೃಷ್ಟಿಕೋನ ಬೇರೆ ಬೇರೆಯಾಗಿದ್ದರೂ ಕೆಲವೊಂದು ಸಾಮ್ಯತೆಗಳನ್ನು ನಾವಿಲ್ಲಿ ಗುರುತಿಸಬಹುದು. ರಾಜಕೀಯ ಜೀವನವು ನೈತಿಕವಾಗಿರಬೇಕೆಂಬುದನ್ನು ಈ ಎರಡೂ ಶಾಸ್ತ್ರಗಳೂ ಒತ್ತಿ ಹೇಳುತ್ತವೆ. ಅರಿಸ್ಟಾಟಲ್‌ರವರು 'ಒಳ್ಳೆಯ ರಾಷ್ಟ್ರವು ಒಳ್ಳೆಯ ಪ್ರಜೆಗಳನ್ನೂ ಕೆಟ್ಟ ರಾಷ್ಟ್ರವು ಕೆಟ್ಟ ಪ್ರಜೆಗಳನ್ನೂ ಪಡೆದಿರುತ್ತದೆ' ಎಂದು ಹೇಳಿದ್ದಾರೆ. ಮಾನವನ ಜೀವನವನ್ನು ಉತ್ತಮಪಡಿಸಲು ರಾಷ್ಟ್ರವು ಅಸ್ತಿತ್ವದಲ್ಲಿ ಮುಂದುವರಿಯುತ್ತದೆ. ಅಂತೆಯೇ ಒಳ್ಳೆಯ ಜೀವನವನ್ನು ಎಲ್ಲರಿಗೂ ಒದಗಿಸುವುದೇ ಇದರ ಅಂತಿಮ ಗುರಿಯಾಗಿರುತ್ತದೆ. ರಾಜ್ಯಶಾಸ್ತ್ರವು ಅನೈತಿಕ ವ್ಯವಹಾರವನ್ನು ಖಂಡಿಸುತ್ತದೆ. ರಾಜಕೀಯ ಜೀವನವು ನಿರ್ಮಲವಾಗಿರಬೇಕೆಂಬ ಆದರ್ಶವನ್ನು ನಮ್ಮ ಮುಂದಿಡುತ್ತದೆ. ಪ್ಲೇಟೋರವರ 'ಆದರ್ಶ ರಾಜ್ಯ'ದ ಪರಿಕಲ್ಪನೆಯೂ ಇದನ್ನೇ ಪ್ರತಿಪಾದಿಸುತ್ತದೆ.

ಗಾಂಧೀಜಿಯವರು ಅಭಿಪ್ರಾಯಪಡುವಂತೆ 'ಧರ್ಮದ ತಳಹದಿಯನ್ನು ಹೊಂದಿದಾಗ ನಮ್ಮ ಚಟುವಟಿಕೆಗಳು ನೈತಿಕವಾಗಿರುತ್ತವೆ. ರಾಜಕೀಯವೂ ಧರ್ಮಕ್ಕೆ ಹೊರತಾಗಿಲ್ಲ. ನೀತಿಗೆಟ್ಟ ರಾಜಕೀಯವು ಮನುಷ್ಯನ ಆತ್ಮವನ್ನೇ ಕೊಲ್ಲುತ್ತದೆ'. ಸಮಾಜದಲ್ಲಿರುವ ಏಳು ಪಾಪಗಳನ್ನು ಗಾಂಧೀಜಿಯವರು ಗುರುತಿಸಿದ್ದಾರೆ.

**ಅವುಗಳೆಂದರೆ:**

ರ್ಮರಹಿತ ಸಂಪತ್ತು.
ಇಲ್ಲದ ಸಂತೋಷ.
ಹಿತ ರಾಜಕೀಯ.
ರಹಿತ ಶಿಕ್ಷಣ.
ರಹಿತ ವಾಣಿಜ್ಯ.
ನವತೆ ಇಲ್ಲದ ವಿಜ್ಞಾನ
ತೆ ಇಲ್ಲದ ಪೂಜೆ.

ಈ ಎಲ್ಲ ಪಾಪಗಳಿಂದ ದೂರವಿದ್ದಾಗ ಮಾನವ ಮಾನವನಾಗುತ್ತಾನೆ. ಇಲ್ಲವಾದಲ್ಲಿ ಸಮಾಜ ಕಂಟಕನಾಗುತ್ತಾನೆ ಎಂದು ಗಾಂಧೀಜಿ ಎಚ್ಚರಿಸಿದ್ದಾರೆ. ಒಟ್ಟಿನಲ್ಲಿ ರಾಜ್ಯದ ಶಾಸನಗಳು ನೀತಿಯುತವಾಗಿದ್ದರೆ ಅವು ಜನರ ವಿಧೇಯತೆಗೆ ಪಾತ್ರವಾಗುತ್ತವೆ. ಜನರ ನೈತಿಕ ಭಾವನೆಗಳಿಗೆ ವಿರುದ್ಧವಾದ ಶಾಸನಗಳನ್ನು ಆಚರಣೆಗೆ ತಂದರೆ ಸಮಾಜದಲ್ಲಿ ಅರಾಜಕತೆಯುಂಟಾಗಿ ನೈತಿಕ ಅಧಃಪತನ ಕಾಣಿಸಿಕೊಳ್ಳುತ್ತದೆ. ಆದುದರಿಂದ ಜನರ ನೈತಿಕಮಟ್ಟವನ್ನು ಉತ್ತಮಪಡಿಸಬಲ್ಲ ಶಾಸನಗಳನ್ನು ಜಾರಿಗೆ ತರುವಲ್ಲಿ ರಾಜ್ಯಶಾಸ್ತ್ರ ಮತ್ತು ನೀತಿಶಾಸ್ತ್ರಗಳ ಸಂಬಂಧ ಅತಿ ಮುಖ್ಯವೆನಿಸುತ್ತದೆ.

ಸಮಾಜಜೀವಿಯಾದ ಮಾನವನ ವಿವಿಧ ಚಟುವಟಿಕೆಗಳ ಅಧ್ಯಯನವೇ ಎಲ್ಲ ಸಮಾಜ ವಿಜ್ಞಾನಗಳ ಉದ್ದೇಶ. ಅಧ್ಯಯನದ ದೃಷ್ಟಿಯಿಂದ ಇವುಗಳನ್ನು ವಿಭಾಗಿಸಿದ್ದರೂ ಅವು ಒಂದೇ ವೃಕ್ಷದ ವಿವಿಧ ಶಾಖೆಗಳು. ಸಮಾಜಶಾಸ್ತ್ರವೇ ಈ ವೃಕ್ಷದ ತಾಯಿ ಬೇರು. ಇವುಗಳಲ್ಲಿ ಯಾವುದೂ ಹೆಚ್ಚಲ್ಲ, ಯಾವುದೂ ಕಡಿಮೆಯಲ್ಲ. ಒಂದಕ್ಕೊಂದು ಸಂಬಂಧ ಹೊಂದಿರುವ ಸಮಾಜ ವಿಜ್ಞಾನದ ಉಪಯುಕ್ತ ಅಂಶಗಳು ವ್ಯಕ್ತಿಯ ವ್ಯಕ್ತಿತ್ವದ ಸರ್ವತೋಮುಖ ಪ್ರಗತಿಗೆ ಅಡಿಗಲ್ಲಾಗಿವೆ. ಅಲ್ಲದೆ ಸಮಾಜ ಜೀವನಕ್ಕೆ ದಾರಿದೀಪವಾಗಿವೆ.

## ಅಭ್ಯಾಸ

**I. ಒಂದು ವಾಕ್ಯದಲ್ಲಿ ಉತ್ತರಿಸಿ:**

1. ರಾಜ್ಯಶಾಸ್ತ್ರ ಮತ್ತು ಇತಿಹಾಸಗಳ ನಡುವಿನ ಸಂಬಂಧದ ಕುರಿತು ಜಾನ್ ಸೀಲೆಯವರ ಅಭಿಮತವೇನು?
2. ಸಮಾಜ ವಿಜ್ಞಾನಗಳ ತಾಯಿ ಎಂದು ಯಾವ ಶಾಸ್ತ್ರ ಪರಿಗಣಿಸಲ್ಪಟ್ಟಿದೆ?
3. ಸಮಾಜ ಶಾಸ್ತ್ರದ ಅಧ್ಯಯನದ ವಿಷಯಗಳು ಯಾವುವು?
4. ಆ್ಯಡಂಸ್ಮಿತ್ ರವರ ಪ್ರಕಾರ ಅರ್ಥಶಾಸ್ತ್ರದ ಮುಖ್ಯ ಗುರಿ ಏನು?
5. ನೀತಿರಹಿತ ರಾಜಕೀಯವು ಮನುಷ್ಯನ ಆತ್ಮವನ್ನೇ ಕೊಲ್ಲುತ್ತದೆ ಎಂದು ಹೇಳಿದ ಚಿಂತಕರು ಯಾರು?

**II. ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ:**

1. ನೀತಿಶಾಸ್ತ್ರದ ಎರಡು ಪ್ರಮುಖ ಅಂಶಗಳನ್ನು ತಿಳಿಸಿ.
2. ರಾಜ್ಯಶಾಸ್ತ್ರದ ಮುಖ್ಯ ಉದ್ದೇಶವನ್ನು ತಿಳಿಸಿ.
3. ಆಲ್ಫ್ರೆಡ್ ಮಾರ್ಷಲ್ ರವರ ಪ್ರಕಾರ ಅರ್ಥಶಾಸ್ತ್ರದ ಗುರಿಯನ್ನು ತಿಳಿಸಿ.

**III.** ನಾಲ್ಕು ಅಥವಾ ಐದು ವಾಕ್ಯಗಳಲ್ಲಿ ಉತ್ತರಿಸಿ:

1. ರಾಜ್ಯಶಾಸ್ತ್ರ ಮತ್ತು ಇತಿಹಾಸಗಳ ನಡುವಿನ ಸಂಬಂಧವನ್ನು ವಿವರಿಸಿ.
2. "ರಾಜ್ಯಶಾಸ್ತ್ರಜ್ಞರಿಗೆ ಸಮಾಜಶಾಸ್ತ್ರದ ಅರಿವು ಇರಬೇಕಾಗುತ್ತದೆ". ಉದಾಹರಣೆಯೊಂದಿಗೆ ಸಮರ್ಥಿಸಿ.
3. ರಾಜ್ಯಶಾಸ್ತ್ರಕ್ಕೂ ಸಮಾಜಶಾಸ್ತ್ರಕ್ಕೂ ಇರುವ ವ್ಯತ್ಯಾಸಗಳನ್ನು ಪಟ್ಟಿ ಮಾಡಿರಿ.
4. ರಾಜಕೀಯ ಜೀವನವು ನೀತಿಶಾಸ್ತ್ರದ ತಳಹದಿಯಲ್ಲಿ ರೂಪುಗೊಳ್ಳುತ್ತದೆ- ಹೇಗೆ?

**IV. ಎಂಟು ಅಥವಾ ಹತ್ತು ವಾಕ್ಯಗಳಲ್ಲಿ ಉತ್ತರಿಸಿ:**

1. ಅರ್ಥಶಾಸ್ತ್ರದೊಂದಿಗೆ ರಾಜ್ಯಶಾಸ್ತ್ರಕ್ಕೆ ಇರುವ ಸಂಬಂಧವನ್ನು ಚರ್ಚಿಸಿ.
2. "ಸಮಾಜಶಾಸ್ತ್ರವು ಎಲ್ಲ ಸಮಾಜ ವಿಜ್ಞಾನಗಳ ತಾಯಿ"– ಈ ಮಾತನ್ನು ಸಮರ್ಥಿಸಿ.

**ಸಲಹಾತ್ಮಕ ಚಟುವಟಿಕೆಗಳು:**

1. "ಮೌಲ್ಯಾಧಾರಿತ ರಾಜಕಾರಣದ ಅಗತ್ಯತೆ"– ಕುರಿತು ಕಿರು ಪ್ರಬಂಧ ಸಿದ್ಧಪಡಿಸಿ.
2. ರಾಜ್ಯದ ಅಭಿವೃದ್ಧಿಗೆ ಸಂಬಂಧಿಸಿದಂತೆ ಪ್ರಸ್ತುತವಿರುವ ಶಾಸನಗಳನ್ನು ಪಟ್ಟಿ ಮಾಡಿ.

# ಅಧ್ಯಾಯ- 3 ರಾಜ್ಯ ಮತ್ತು ಪೌರ (State and Citizen)

**ಕಲಿಕಾ ಉದ್ದೇಶಗಳು**

1. ರಾಜ್ಯದ ಅರ್ಥ ಮತ್ತು ವ್ಯಾಖ್ಯೆಗಳನ್ನು ಅರ್ಥೈಸಿಕೊಳ್ಳುವುದು.
2. ರಾಜ್ಯದ ಮಹತ್ವವನ್ನು ತಿಳಿಯುವುದು.
3. ರಾಜ್ಯದ ಮೂಲಾಂಶಗಳ ಅವಶ್ಯಕತೆಯನ್ನು ಅರಿಯುವುದು.
4. ಪೌರ ಮತ್ತು ಪೌರತ್ವದ ಅರ್ಥದೊಂದಿಗೆ ವ್ಯತ್ಯಾಸವನ್ನು ಗುರುತಿಸುವುದು.
5. ಪೌರತ್ವವನ್ನು ಪಡೆದುಕೊಳ್ಳುವ ಮತ್ತು ಕಳೆದುಕೊಳ್ಳುವ ವಿಧಾನಗಳನ್ನು ತಿಳಿಯುವುದು.
6. ಉತ್ತಮ ಪೌರನ ಗುಣಗಳನ್ನು ಅಳವಡಿಸಿಕೊಳ್ಳುವುದು.

"ವ್ಯಕ್ತಿಗೆ ಜನ್ಮ ನೀಡುವ ತಾಯಿಯೇ ರಾಜ್ಯ" **ಸಾಕ್ರೆಟಿಸ್**

"ಸಮರ್ಪಕ ಹಾಗೂ ಸ್ವಾವಲಂಬಿ ಜೀವನಕ್ಕಾಗಿ ಸಂತೋಷಭರಿತ ಹಾಗೂ ಗೌವರಯುತ ಜೀವನಕ್ಕಾಗಿ ಇರುವ ಕುಟುಂಬಗಳು ಮತ್ತು ಗ್ರಾಮಗಳ ಸಮೂಹವೇ ರಾಜ್ಯ." **ಅರಿಸ್ಟಾಟಲ್**

## ಪೀಠಿಕೆ:

ರಾಜ್ಯವು ರಾಜ್ಯಶಾಸ್ತ್ರದ ವಿಷಯವಸ್ತುವಾಗಿದೆ. ರಾಜ್ಯವಿಲ್ಲದೆ ರಾಜ್ಯಶಾಸ್ತ್ರವಿರಲಾರದು. ರಾಜ್ಯವನ್ನು ಕೇಂದ್ರ ಬಿಂದುವನ್ನಾಗಿಟ್ಟುಕೊಂಡು ಅಧ್ಯಯನ ಮಾಡಿದ ಶಾಸ್ತ್ರಜ್ಞರು ಮತ್ತು ಚಿಂತಕರು ಅನೇಕರಿದ್ದಾರೆ. ಆದರೆ ಮೊಟ್ಟ ಮೊದಲಬಾರಿಗೆ ವೈಜ್ಞಾನಿಕವಾಗಿ ಅಧ್ಯಯನ ಮಾಡಿದ ಕೀರ್ತಿ ಅರಿಸ್ಟಾಟಲ್ ರವರಿಗೆ ಸಲ್ಲುತ್ತದೆ.

ವ್ಯಕ್ತಿ ಸಮಾಜಜೀವಿ, ರಾಜಕೀಯ ಜೀವಿ ಮತ್ತು ಸಂಘಜೀವಿಯೂ ಹೌದು ಎಂದು ಅರಿಸ್ಟಾಟಲ್ ಅಭಿಪ್ರಾಯಪಟ್ಟಿದ್ದಾರೆ. ಮನುಷ್ಯನು ಸ್ವಭಾವತಹಃ ಕಲಹಪ್ರಿಯನು ಮತ್ತು ಕೋಮಲ ಸ್ವಭಾವದವನು ಹೌದು. ಇಂತಹ ಸ್ವಭಾವದ ಮಾನವನ ನಡವಳಿಕೆಯನ್ನು ನಿಯಂತ್ರಿಸಿ ಮಾರ್ಗದರ್ಶಿಸಿ ಶಾಂತಿ ಸುವ್ಯವಸ್ಥೆಯನ್ನು ಕಾಪಾಡಿ ಸರ್ವರ ಒಳಿತನ್ನು ಸಾಧಿಸಲು ಅಸ್ತಿತ್ವಕ್ಕೆಬಂದ ಪರಮೋಚ್ಛ ಸಂಸ್ಥೆಯೇ ರಾಜ್ಯ.

ರಾಜ್ಯ ಮತ್ತು ಪೌರ ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ರಾಜ್ಯ ಮತ್ತು ಪೌರನ ನಡುವೆ ಅವಿನಾಭಾವ ಸಂಬಂಧವಿದೆ. ಇಂದು ಅಸ್ತಿತ್ವದಲ್ಲಿರುವ ಬಹುಮುಖಿ ಸಮಾಜದಲ್ಲಿ ಅನೇಕ ಸಂಘಸಂಸ್ಥೆಗಳಿವೆ. ಅವುಗಳೆಲ್ಲಾ ಅತ್ಯಂತ ಶ್ರೇಷ್ಠವಾದ ಏಕೈಕ ಸಂಸ್ಥೆಯೇ ರಾಜ್ಯ.

## 3.1 ರಾಜ್ಯದ ಅರ್ಥ

ರಾಜ್ಯ ಎಂಬ ಪದಕ್ಕೆ ಸಾಮಾನ್ಯವಾಗಿ ಸರ್ಕಾರ, ಸಮಾಜ, ಸಂಘ, ಒಕ್ಕೂಟ, ರಾಷ್ಟ್ರ ಇತ್ಯಾದಿ ಪದಗಳನ್ನು ಸಮನಾರ್ಥಕವಾಗಿ ಬಳಸಲಾಗುತಿತ್ತು.

**'ಸ್ಟೇಟ್'** ಅಥವಾ ರಾಜ್ಯ ಎಂಬ ಪದವು ಗ್ರೀಕ್ ಭಾಷೆಯ 'ಪೋಲಿಸ್' ಎಂಬ ಪದದಿಂದ ಬಂದಿದೆ. ಪೋಲಿಸ್ ಎಂದರೆ **ನಗರ ರಾಜ್ಯ** ಎಂದರ್ಥ.

ಆಧುನಿಕ ಅರ್ಥದಲ್ಲಿ ರಾಜ್ಯ ಎಂಬ ಪದವನ್ನು ಪ್ರಪ್ರಥಮ ಬಾರಿಗೆ 1513 ರಲ್ಲಿ ಇಟಲಿಯ ನಿಕಲೋ ಮೆಕೆವೆಲ್ಲಿಯವರು 'ದಿ ಪ್ರಿನ್ಸ್' ಎಂಬ ಗ್ರಂಥದಲ್ಲಿ ಬಳಸಿದರು.

**ವಿವಿಧ ದೇಶಗಳ ಭಾಷೆಯಲ್ಲಿ ರಾಜ್ಯಕ್ಕಿರುವ ಹೆಸರುಗಳು**

| ಪ್ರಾಚೀನ ರೋಮನ್ನರು | ಸಿವಿಟಾಸ್ |
|---|---|
| ಫ್ರೆಂಚ್‌ರು | ಎಟಾಟ್ |
| ಜರ್ಮನ್‌ರು | ಸ್ಟಾಟ್ |
| ಟ್ಯೂಟನ್ನರು | ಸ್ಟೇಟಸ್ |
| ಇಟಲಿಯನ್ನರು | ಸ್ಟಾಷಿಯೋ |

## 3.2: ವ್ಯಾಖ್ಯೆಗಳು

1) **ಪ್ರೊ. ಹೆರಾಲ್ಡ್ ಜೆ. ಲಾಸ್ಕಿ ಯವರ ಪ್ರಕಾರ:** "ನಿರ್ದಿಷ್ಟ ಭೂ ಪ್ರದೇಶದಲ್ಲಿ ರಾಜಕೀಯವಾಗಿ ಸುಸಂಘಟಿತವಾದ ಜನ ಸಮುದಾಯವೇ ರಾಜ್ಯ".

2) **ವುಡ್ರೋ ವಿಲ್ಸನ್ ರವರ ಪ್ರಕಾರ:** "ನಿರ್ದಿಷ್ಟ ಭೂ ಪ್ರದೇಶದಲ್ಲಿ ಶಾಸನಕ್ಕಾಗಿ ಸಂಘಟಿತವಾಗಿರುವ ಜನತೆಯೇ ರಾಜ್ಯ".

3) **ಪ್ರೊ. ಜೆ. ಡಬ್ಲ್ಯೂ ಗಾರ್ನರ್ ರವರ ಪ್ರಕಾರ:** "ಆಂತರಿಕವಾಗಿ ಹಾಗೂ ಬಾಹ್ಯವಾಗಿ ಸ್ವತಂತ್ರ್ಯವಾಗಿದ್ದು ನಿರ್ದಿಷ್ಟ ಭೂ ಪ್ರದೇಶದಲ್ಲಿ ಶಾಶ್ವತವಾಗಿ ನೆಲೆಸಿರುವ ಸಂಘಟಿತ ಸರ್ಕಾರದ ಮೇಲೆ ಸಾರ್ವಭೌಮಾಧಿಕಾರ ಹೊಂದಿರುವ ಸಮಾಜವೇ ರಾಜ್ಯ".

## 3.3 ರಾಜ್ಯದ ಮಹತ್ವ

ರಾಜಕೀಯ ಚಿಂತಕರಲ್ಲಿ ರಾಜ್ಯದ ಮಹತ್ವದ ಕುರಿತು ಒಮ್ಮತ ಅಭಿಪ್ರಾಯವಿಲ್ಲ. ಎಲ್ಲಾ ಸಾಮಾಜಿಕ ಸಂಸ್ಥೆಗಳಲ್ಲಿಯೇ ಶಕ್ತಿಶಾಲಿಯಾದ ಸಂಸ್ಥೆ ಎಂದರೆ ರಾಜ್ಯ.

'ರಾಜ್ಯ ಬಿಟ್ಟು ಯಾರು ವಾಸಿಸುತ್ತಾರೋ ಅವರು ದೇವರಾಗಿರಬೇಕು ಅಥವಾ ಪ್ರಾಣಿಯಾಗಿರಬೇಕು' ಎಂದು ಅರಿಸ್ಟಾಟಲ್ ರವರು ಅಭಿಪ್ರಾಯ ಪಟ್ಟಿದ್ದಾರೆ. ಮೂಲತಃ ರಾಜಕೀಯ ಜೀವಿಯಾದ ಮಾನವನ ಜೀವನಕ್ಕಾಗಿಯೇ ಹುಟ್ಟಿಕೊಂಡ ರಾಜ್ಯ ಅವನ ಉತ್ತಮ ಜೀವನಕ್ಕಾಗಿಯೇ ಮುಂದುವರಿಯುತ್ತದೆ. ಇದು ಕಾಲ ದೇಶಗಳೆನ್ನದೇ ರಾಜ್ಯವು ಸರ್ವರ ಜೀವನದಲ್ಲಿಯು ನಿರಂತರವಾಗಿ ಪ್ರಮುಖ ಪಾತ್ರವನ್ನು ನಿರ್ವಹಿಸುತ್ತದೆ. ಇದು ತನ್ನ ಅಸ್ತಿತ್ವದ ನಿರಂತರತೆಯನ್ನು ಕಾಪಾಡಿಕೊಳ್ಳುತ್ತದೆ.

ಆಧುನಿಕ ರಾಜ್ಯಗಳು ಹಿಂದಿನಂತೆ ಆರಕ್ಷಿತ ರಾಜ್ಯಗಳಾಗಿಲ್ಲ, ಬದಲಾಗಿ ಕಲಾಣ ರಾಜ್ಯಗಳಾಗಿವೆ. ಆದ್ದರಿಂದ ರಾಜ್ಯದ ಪ್ರಾಮುಖ್ಯತೆಯನ್ನು ಈ ಕೆಳಕಂಡ ಅಂಶಗಳಿಂದ ದೃಢಪಡಿಸಿಕೊಳ್ಳಬಹುದು.

1. **ಆರಕ್ಷಿತ ರಾಜ್ಯ:** ಆಂತರಿಕ ಮತ್ತು ಬಾಹ್ಯ ಭದ್ರತೆಯೊಂದಿಗೆ ಕಾನೂನಿನ ಮೂಲಕ ಸುವ್ಯವಸ್ಥೆಯನ್ನು ನಿರ್ವಹಣೆ ಮಾಡುವುದಕ್ಕೆ ಸೀಮಿತವಾದ ವ್ಯವಸ್ಥೆಯೇ ಆರಕ್ಷಿತ ರಾಜ್ಯ.
2. **ಕಲ್ಯಾಣ ರಾಜ್ಯ:** ಪ್ರಜೆಗಳ ಸುಖಮಯ ಜೀವನಕ್ಕಾಗಿ ಮೂಲಭೂತ ಅಗತ್ಯತೆಗಳನ್ನು ಪೂರೈಸುವ ರಾಜ್ಯವೇ ಕಲ್ಯಾಣ ರಾಜ್ಯ.

*1) ನಾಗರಿಕರ ರಕ್ಷಣೆ:*

ವಿದೇಶಿ ಆಕ್ರಮಣ ಮತ್ತು ಆಂತರಿಕ ಗಲಭೆ ಘರ್ಷಣೆಗಳ ಸಂದರ್ಭಗಳಲ್ಲಿ ಪ್ರಜೆಗಳ ಪ್ರಾಣ, ಆಸ್ತಿ ಮತ್ತು ಸ್ವಾತಂತ್ರ್ಯವನ್ನು ರಕ್ಷಿಸುವ ಗುರುತರ ಜವಾಬ್ದಾರಿಯನ್ನು ರಾಜ್ಯ ನಿರ್ವಹಿಸುತ್ತದೆ. ಜನರ ಸರ್ವತೋಮುಖ ಪ್ರಗತಿ ಹಾಗೂ ಹಿತರಕ್ಷಣೆಯನ್ನು ಮಾಡುವುದು ರಾಜ್ಯದ ಮುಖ್ಯ ಕರ್ತವ್ಯವಾಗಿದೆ.

*2) ಜನರ ಹಕ್ಕು ಮತ್ತು ಕರ್ತವ್ಯಗಳ ರಕ್ಷಣೆ:*

ಜನತೆಗೆ ನೀಡಿರುವ ಹಕ್ಕುಗಳ ಆಧಾರದ ಮೇಲೆ ರಾಜ್ಯದ ಸ್ವರೂಪ ಮತ್ತು ಸ್ಥಾನಮಾನವು ನಿರ್ಧರಿಸಲ್ಪಡುತ್ತದೆ. ಹಕ್ಕು ಮತ್ತು ಕರ್ತವ್ಯಗಳಿಂದ ಪ್ರಜೆಗಳ ವ್ಯಕ್ತಿತ್ವ ವಿಕಾಸವಾಗುತ್ತದೆ. ಇವುಗಳಿಂದಲೇ ಪ್ರಜೆಗಳ ಮತ್ತು ರಾಜ್ಯದ ನಡುವಿನ ಬಾಂಧವ್ಯ ವೃದ್ಧಿಸುತ್ತದೆ.

*3) ದುರ್ಬಲ ವರ್ಗದವರ ಹಿತರಕ್ಷಣೆ:*

ರಾಜ್ಯದಲ್ಲಿರುವ ದೀನರು, ದಲಿತರು, ಹಿಂದುಳಿದ ವರ್ಗದವರು ಅಲ್ಪ ಸಂಖ್ಯಾತರು, ಮಕ್ಕಳು, ಮಹಿಳೆಯರು, ವೃದ್ಧರು ಮತ್ತು ವಿವಿಧ ಸ್ವರೂಪದ ಅಂಗ ವಿಕಲಚೇತನರನ್ನು ಸಂರಕ್ಷಣೆ ಮಾಡುವ ಜವಾಬ್ದಾರಿ ರಾಜ್ಯಕ್ಕಿದೆ. ಸಮಾಜಕ್ಕೆ ಹೊರೆಯಾಗದಂತೆ ಬದುಕಲು ರಾಷ್ಟ್ರ ನಿರ್ಮಾಣಕ್ಕಾಗಿ ಅವರ ಮಾನವ ಸಂಪನ್ಮೂಲವನ್ನು ಬೆಳಸಿ ಬಳಸಿಕೊಳ್ಳುತ್ತದೆ. ದುರ್ಬಲ ವರ್ಗದವರನ್ನು ಶೋಷಣೆ ಮತ್ತು ದಬ್ಬಾಳಿಕೆಯಿಂದ ಮುಕ್ತಗೊಳಿಸಿ ಸಾಮಾಜಿಕ ನ್ಯಾಯ ಮತ್ತು ಸಮಾನತೆಯನ್ನು ಸ್ಥಾಪಿಸಲು ಪ್ರಯತ್ನಿಸುತ್ತದೆ.

*4) ಸುವ್ಯವಸ್ಥಿತ ಸಮಾಜದ ನಿರ್ಮಾಣ ಮತ್ತು ನಿರ್ವಹಣೆ:*

ರಾಜ್ಯವಿಲ್ಲದಿದ್ದರೆ ಸಮಾಜ ಅರಾಜಕತೆಯ ತಾಣವಾಗುತ್ತದೆ. ಅರಾಜಕತೆಯನ್ನು ಹೋಗಲಾಡಿಸಿ ಶಾಂತಿ ಮತ್ತು ಸುವ್ಯವಸ್ಥೆಯನ್ನು ತರುವ ಏಕೈಕ ಸಂಸ್ಥೆ ರಾಜ್ಯ. ಜನರಿಗೆ ಮೂಲಭೂತ ಸೌಕರ್ಯಗಳಾದ ವಸತಿ, ಶಿಕ್ಷಣ, ಆರೋಗ್ಯ ಇತ್ಯಾದಿಗಳನ್ನು ಒದಗಿಸುವುದು ಹಾಗೂ ಉದ್ಯೋಗ, ರಕ್ಷಣೆ, ವೇತನ ಇತ್ಯಾದಿ ಸಾಮಾನ್ಯ ಭದ್ರತೆಯನ್ನು ಒದಗಿಸುವುದು ರಾಜ್ಯದಿಂದ ಮಾತ್ರ ಸಾಧ್ಯ. ಜನನದಿಂದ ಮರಣದವರೆಗೆ ಜನರಿಗೆ ಸಕಲ ಸೌಲಭ್ಯಗಳನ್ನು ಒದಗಿಸಿ ಸಮಾಜ ನಿರ್ಮಾಣ ಮತ್ತು ನಿರ್ವಹಣೆ ಮಾಡುವುದು ರಾಜ್ಯದ ಕರ್ತವ್ಯವಾಗಿದೆ.

### *5) ಪ್ರಗತಿಯ ರುವಾರಿ:*

ಪ್ರಜೆಗಳ ಸಹಭಾಗಿತ್ವದೊಂದಿಗೆ ಸರ್ವಾಂಗೀಣ ಪ್ರಗತಿಯನ್ನು ಸಾಧಿಸುವಲ್ಲಿ ರಾಜ್ಯ ಪ್ರಮುಖ ಪಾತ್ರ ವಹಿಸುತ್ತದೆ. ರಾಜ್ಯವೇ ಅಭಿವೃದ್ಧಿಯ ಚಾಲಕಯಂತ್ರವಾಗಿದೆ. ರಾಜ್ಯ ರಾಜಕೀಯವಾಗಿ ಗುರುತಿಸಲ್ಪಟ್ಟ ತನ್ನ ಭೂ ಪ್ರದೇಶದಲ್ಲಿ ವಾಸವಾಗಿರುವ ಸುಸಂಘಟಿತ ಜನ-ಸ್ತೋಮಕ್ಕೆ ಅಷ್ಟೇ ಅಲ್ಲದೆ ಸಮಗ್ರ ಮನುಕುಲಕ್ಕೆ ಪ್ರಯೋಜನಕಾರಿಯಾಗಿದೆ.

ಮನುಕುಲದ ಉಳುವಿಗಾಗಿ ಶಾಂತಿಗೆ ಭಂಗ ತರುವ ರಾಷ್ಟ್ರಗಳ ಆಕ್ರಮಣಕಾರಿ ಪ್ರವೃತ್ತಿಯನ್ನು ತಡೆಗಟ್ಟುವಲ್ಲಿ ರಾಜ್ಯ ವಿಶ್ವಸಂಸ್ಥೆಯಂತಹ ಅಂತರರಾಷ್ಟ್ರೀಯ ಸಂಘಟನೆಗೂ ಬೆಂಬಲ ನೀಡುತ್ತದೆ.

ಇಷ್ಟೆಲ್ಲ ಮಹತ್ವವನ್ನು ಹೊಂದಿರುವ ರಾಜ್ಯ ತನ್ನದೆ ಆದ ಮೂಲಾಂಶಗಳನ್ನು ಹೊಂದಿದೆ.

## 3.4: ರಾಜ್ಯದ ಮೂಲಾಂಶಗಳು

ರಾಜ್ಯದ ನಿರ್ಮಾಣಕ್ಕೆ ಮತ್ತು ನಿರ್ವಹಣೆಗೆ ಪೂರಕವಾದ ನಿರ್ಧಾರಕ ಅಂಶಗಳೇ ರಾಜ್ಯದ ಮೂಲಾಂಶಗಳು. ರಾಜ್ಯವು ನಾಲ್ಕು ಮೂಲಾಂಶಗಳಿಂದ ರೂಪಗೊಂಡಿದೆ.

ರಾಜ್ಯ

1. ನಿರ್ದಿಷ್ಟ ಭೂಪ್ರದೇಶ
2. ಜನಸಂಖ್ಯೆ
3. ಸರ್ಕಾರ
4. ಪರಮಾಧಿಕಾರ

### *1) ನಿರ್ದಿಷ್ಟ ಭೂಪ್ರದೇಶ:*

ರಾಜ್ಯದ ಪ್ರಪ್ರಥಮ ಪ್ರಮುಖ ಮೂಲಾಂಶವೆಂದರೆ ನಿರ್ದಿಷ್ಟ ಭೂಪ್ರದೇಶ. ಭೂ ಪ್ರದೇಶದ ಹೊರತಾಗಿ ಯಾವುದೇ ಒಂದು ರಾಜ್ಯ ಅಸ್ತಿತ್ವಕ್ಕೆ ಬರಲು ಸಾಧ್ಯವಿಲ್ಲ. ಒಂದು ರಾಜ್ಯದಲ್ಲಿರುವ ಜನರು ವಾಸ ಮಾಡಲು ರಾಜಕೀಯವಾಗಿ ಸಂಘಟಿತರಾಗಲು ನಿರ್ದಿಷ್ಟ ಭೂ ಪ್ರದೇಶವಿಲ್ಲದ ಅಲೆಮಾರಿಗಳೂ ರಾಜ್ಯವನ್ನು ಸೃಷ್ಟಿಸಲಾರರು.

ಉದಾ: 1948 ರ ಅಂತ್ಯದವರೆಗೂ ನಾಗರಿಕ ಜನರಾದ ಯಹೂದಿಗಳು ಇಸ್ರೇಲ್ ಸ್ಥಾಪನೆಯಾಗುವರಿಗೂ ರಾಜ್ಯ ವ್ಯವಸ್ಥೆಯನ್ನು ಹೊಂದಿರಲಿಲ್ಲ. ಭೂ ಪ್ರದೇಶದ ಗಾತ್ರ ಕುರಿತು ರಾಜಕೀಯ ಚಿಂತಕರಲ್ಲಿ ಒಮ್ಮತ ಅಭಿಪ್ರಾಯವಿಲ್ಲ. ಅರಿಸ್ಟಾಟಲ್ ಮತ್ತು ರೂಸೋರಂತಹ ಚಿಂತಕರು ರಾಜ್ಯ ಚಿಕ್ಕದಾಗಿರಬೇಕೆಂದು ಪ್ರತಿಪಾದಿಸಿದರೆ, ಲಾರ್ಡ ಆಕ್ಟನ್ ಮತ್ತು ಟ್ರಾಕ್‌ಸಿ ವಿಶಾಲವಾಗಿರಬೇಕು ಎಂದು ಅಭಿಪ್ರಾಯಪಟ್ಟಿದ್ದಾರೆ.

ವ್ಯಾಟಿಕನ್, ಮೊನಾಕೊ, ಇಂಗ್ಲೆಂಡ್, ಮುಂತಾದ ರಾಷ್ಟ್ರಗಳು ಗಾತ್ರದಲ್ಲಿ ಚಿಕ್ಕವುಗಳಾದರೆ, ರಷ್ಯ, ಕೆನಡಾ, ಅಮೆರಿಕಾ ಸಂಯುಕ್ತ ಸಂಸ್ಥಾನ, ಚೀನ, ಬ್ರೆಜಿಲ್, ಆಸ್ಟ್ರೇಲಿಯ, ಭಾರತ ಪ್ರಪಂಚದ ದೊಡ್ಡ ರಾಷ್ಟ್ರಗಳಾಗಿವೆ.

**ವಿಸ್ತೀರ್ಣದಲ್ಲಿ ಚಿಕ್ಕ ರಾಷ್ಟ್ರಗಳು**

| **ಹೆಸರು** | **ವಿಸ್ತೀರ್ಣ** |
|---|---|
| 1) ವ್ಯಾಟಿಕನ್ | 0.17 ಚದರ ಮೈಲಿಗಳು |
| 2) ಮೋನ್ಯಾಕೋ | 0.75 ಚದರ ಮೈಲಿಗಳು |
| 3) ನಾಮ್ರಾ | 8.2 ಚದರ ಮೈಲಿಗಳು |
| 4) ಸ್ಯಾನ್ ಮ್ಯಾರಿನೋ | 24 ಚದರ ಮೈಲಿಗಳು |
| 5) ಲಿಚ್ಟನ್ ಸ್ಟೀನ್ | 62 ಚದರ ಮೈಲಿಗಳು |

ಭೂ ಪ್ರದೇಶ ಚಿಕ್ಕದಾಗಿದ್ದರೆ ಆಡಳಿತ ನಿರ್ವಹಣೆಗಾಗಿ, ರಾಷ್ಟ್ರೀಯ ಮನೋಭಾವನೆ ವೃದ್ಧಿಸಲು ಹೆಚ್ಚು ಸಹಾಯಕವಾಗುತ್ತದೆ. ವಿಶಾಲ ಭೂಪ್ರದೇಶ ಹೊಂದಿರುವ ರಾಜ್ಯಗಳಿಂದಾಗುವ ಅನುಕೂಲವೆಂದರೆ ವಿಪುಲ ನೈಸರ್ಗಿಕ ಸಂಪನ್ಮೂಲಗಳ ನೆರವಿನೊಂದಿಗೆ ಆರ್ಥಿಕವಾಗಿ ಸ್ವಾವಲಂಬಿಯಾಗಲು ಸಾಧ್ಯವಾಗುತ್ತದೆ. ರಾಜ್ಯದ ಭೂಪ್ರದೇಶ ಚಿಕ್ಕದಿರಲಿ ದೊಡ್ಡದಿರಲಿ ಅದರ ಫಲವತ್ತತೆ ಮತ್ತು ಅಲ್ಲಿಯ ಜನರ ಗುಣಮಟ್ಟ ರಾಷ್ಟ್ರದ ಪ್ರಗತಿಯಲ್ಲಿ ಪ್ರಮುಖ ಪಾತ್ರವಹಿಸುತ್ತವೆ.

### *2) ಜನಸಂಖ್ಯೆ*

ನಿರ್ದಿಷ್ಟ ಭೂ ಪ್ರದೇಶದಂತೆ ಜನಸಂಖ್ಯೆಯು ಅತ್ಯಂತ ಅವಶ್ಯಕ ಮೂಲಾಂಶವಾಗಿದೆ. ಮಾನವನ ಅಗತ್ಯತೆಗಾಗಿ ಹುಟ್ಟಿಕೊಂಡ ಸಂಸ್ಥೆಯೇ ರಾಜ್ಯ. ಒಬ್ಬ ವ್ಯಕ್ತಿಯಿಂದಾಗಲಿ ಒಂದು ಕುಟುಂಬದಿಂದಾಗಲಿ ರಾಜ್ಯವನ್ನು ನಿರ್ಮಾಣ ಮಾಡಲು ಸಾಧ್ಯವಿಲ್ಲ. ರಾಜ್ಯದ ರಚನೆಗೆ ಅಸಂಖ್ಯಾತ ಕುಟುಂಬಗಳ ಅಗತ್ಯವಿದೆ.

ಒಂದು ರಾಜ್ಯ ನಿರ್ಮಾಣವಾಗಬೇಕಾದರೆ ಜನಸಂಖ್ಯೆಪ್ರಮಾಣ ಎಷ್ಟಿರಬೇಕು ಎಂಬುದರ ಕುರಿತು ಭಿನ್ನಾಭಿಪ್ರಾಯಗಳಿವೆ. ಪ್ರಾಚೀನ ಗ್ರೀಕ್‌ನ ರಾಜ್ಯಶಾಸ್ತ್ರಜ್ಞರಾದ ಪ್ಲೇಟೋರವರ ಪ್ರಕಾರ ರಾಜ್ಯದ ಜನಸಂಖ್ಯೆ5040, ರೊಸೋರವರ ಪ್ರಕಾರ 10,000 ಇರಬೇಕೆಂದೂ ಅಭಿಪ್ರಾಯಪಟ್ಟಿದ್ದಾರೆ. ಆದರೆ ಅರಿಸ್ಟಾಟಲ್ ರವರ ಪ್ರಕಾರ ದೇಶದ ಜನಸಂಖ್ಯೆಯೂ ಅತಿ ಹೆಚ್ಚು ಇರಬಾರದು. ಕಡಿಮೆಯೂ ಇರಬಾರದು. ಜನಸಂಖ್ಯೆಯು ಆ ದೇಶದ ಭೂಪ್ರದೇಶ ಮತ್ತು ಸಂಪನ್ಮೂಲಗಳಿಗೆ ಹಾಗೂ ದೇಶದ ಆಡಳಿತಕ್ಕೆ ಅನುಗುಣವಾಗಿರಬೇಕು ಎಂದು ಅಭಿಪ್ರಾಯಪಟ್ಟಿದ್ದಾರೆ.

ವಿಶ್ವದ ಆಧುನಿಕ ರಾಜ್ಯಗಳಲ್ಲಿ ಜನಸಂಖ್ಯೆಯ ಪ್ರಮಾಣ ಏಕ ಪ್ರಕಾರವಾಗಿಲ್ಲ. ಚೀನಾ ಮತ್ತು ಭಾರತದಂತಹ ರಾಷ್ಟ್ರಗಳು ಬೃಹತ್ ಪ್ರಮಾಣದ ಜನಸಂಖ್ಯೆ ಹೊಂದಿದ್ದರೆ, ವ್ಯಾಟಿಕನ್, ಪನಾಮ, ಸ್ಯಾನ್ ಮ್ಯಾರಿನೊದಂತಹ ರಾಷ್ಟ್ರಗಳಲ್ಲಿ ಜನಸಂಖ್ಯೆಯ ಪ್ರಮಾಣ ತೀರ ಕಡಿಮೆ ಇದೆ. ಆದ್ದರಿಂದ ರಾಜ್ಯದ ರಚನೆಯಲ್ಲಿ ಜನಸಂಖ್ಯೆಯು ನಿರ್ಧಾರಕ ಅಂಶವೇ ಹೊರತು ಜನಸಂಖ್ಯೆಯ ಗಾತ್ರವಲ್ಲ.

### *3) ಸರ್ಕಾರ:*

ರಾಜ್ಯದ ಮೂಲಾಂಶಗಳಲ್ಲಿ ಸರ್ಕಾರವು ಪ್ರಮುಖವಾದುದು. ಇದನ್ನು ಆಳುವ ಅಥವಾ ನಿರ್ವಹಣಾ ಅಂಗವೆಂದೂ ಕರೆಯಲಾಗುತ್ತದೆ. ರಾಜ್ಯ ಎಂಬ ಹಡಗನ್ನು ಸರ್ಕಾರವೆಂಬ ಚುಕ್ಕಾಣಿಯಿಂದ ನಡೆಸಲಾಗುತ್ತದೆ. ಜನಸಾಮಾನ್ಯರ ಇಚ್ಛೆಯು ಯಾವ ಸಂಸ್ಥೆಯ ಮೂಲಕ ಜಾರಿಗೊಳಿಸಲ್ಪಡುತ್ತದೆಯೋ ಅಂತ ರಾಜಕೀಯ ಸಂಸ್ಥೆಯೇ ಸರ್ಕಾರ. ಕಾನೂನು ಸುವ್ಯವಸ್ಥೆಯನ್ನು ಕಾಪಾಡಿಕೊಂಡು ನ್ಯಾಯದ ಮೂಲಕ ಸಮಾಜ ಕಲಾಣವನ್ನು ಸಾಧಿಸುವ ಕಾರ್ಯ ನಿರ್ವಹಿಸುತ್ತದೆ. ಸರ್ಕಾರವಿಲ್ಲದಿದ್ದರೆ ಅರಾಜಕತೆ ಉಂಟಾಗುತ್ತದೆ. ಅಂತರರಾಷ್ಟ್ರೀಯವಾಗಿಯೂ ರಾಜ್ಯವನ್ನು ಪ್ರತಿನಿಧಿಸುವ ನಿರ್ವಹಣಾಂಗವೇ ಸರಕಾರ.

**ಸರಕಾರಕ್ಕೆ ಮೂರು ಅಂಗಗಳಿವೆ ಅವುಗಳೆಂದರೆ:**

| | |
|---|---|
| 1) ಶಾಸಕಾಂಗ | ಶಾಸನಗಳನ್ನು ರಚಿಸುತ್ತದೆ. |
| 2) ಕಾರ್ಯಾಂಗ | ಕಾನೂನುಗಳನ್ನು ಜಾರಿಗೊಳಿಸುತ್ತದೆ. |
| 3) ನ್ಯಾಯಾಂಗ | ಸಂವಿಧಾನವನ್ನು ಅರ್ಥೈಸಿ, ವ್ಯಾಜ್ಯಗಳನ್ನು ಪರಿಹರಿಸಿ ನ್ಯಾಯದಾನ ಮಾಡುತ್ತದೆ. |

ಪ್ರಜಾಪ್ರಭುತ್ವವಾಗಿರಲಿ, ನಿರುಂಕುಶ ಪ್ರಭುತ್ವವಾಗಲಿ, ರಾಜಪ್ರಭುತ್ವವಾಗಲಿ, ಸಮಾಜವಾದಿಯಾಗಲಿ, ಯಾವುದೇ ವಿಧದ ವ್ಯವಸ್ಥೆಗೂ ಸರ್ಕಾರ ಅವಶ್ಯಕ.

### *4) ಪರಮಾಧಿಕಾರ:*

ರಾಜ್ಯದ ಮೂಲಾಂಶಗಳಲ್ಲಿ ಪರಮಾಧಿಕಾರವು ನಾಲ್ಕನೆಯ ಮೂಲಾಂಶವಾಗಿದೆ. ರಾಜ್ಯದ ಸರ್ವೋಚ್ಚ ಅಧಿಕಾರವೇ ಪರಮಾಧಿಕಾರ. ರಾಜ್ಯದ ಆತ್ಮವಾಗಿರುವ ಹಾಗೂ ರಾಜ್ಯವನ್ನು ಇನ್ನಾವುದೇ ಸಂಘ ಸಂಸ್ಥೆಗಳಿಂದ ಪ್ರತ್ಯೇಕಿಸುವ ಪ್ರಶ್ನಾತೀತ ಪರಮೋಚ್ಚ ಅಧಿಕಾರವೇ ಪರಮಾಧಿಕಾರ.

ಸಾವರನಿಟಿ (Sovereighty) ಅಥವಾ ಪರಮಾಧಿಕಾರ ಎಂಬ ಪದವು ಲಾಟಿನ್ ಭಾಷೆಯ 'ಸ್ಪುಪರಾನಸ್' ಎಂಬ ಪದದಿಂದ ಬಂದಿದೆ. 'ಸ್ಪೂಪರಾನಸ್' ಎಂದರೆ 'ಸರ್ವಶ್ರೇಷ್ಠ' ಅಥವಾ 'ಪರಮ ಶ್ರೇಷ್ಠ' ಎಂದರ್ಥ.

ಯಾವುದೇ ಪರಮಾಧಿಕಾರವುಳ್ಳ ರಾಜ್ಯವನ್ನು ಸಾರ್ವಭೌಮ ರಾಜ್ಯ ಎನ್ನುತ್ತೇವೆ.

**ಹ್ಯೂಗೋ ಗ್ರೋಷಿಯಸ್‌ರ**ವರ ಪ್ರಕಾರ: 'ಯಾರ ಆಜ್ಞೆಯನ್ನು ಯಾರು ತಿರಸ್ಕರಿಸುವಂತಿಲ್ಲವೋ, ಯಾವ ಕಾರ್ಯ ವಿಧಾನವನ್ನು ಯಾರು ಪ್ರಶ್ನಿಸುವಂತಿಲ್ಲವೋ ಅಂತಹ ಸರ್ವೋಚ್ಚ ರಾಜಕೀಯ ಅಧಿಕಾರವೇ ಪರಮಾಧಿಕಾರ'.

ಆಧುನಿಕ ಯುಗದಲ್ಲಿ ಪರಮಾಧಿಕಾರವನ್ನು ಪ್ರಪ್ರಥಮ ಬಾರಿಗೆ ಬಳಸಿದ ಮತ್ತು ವ್ಯಾಖ್ಯಾನಿಸಿದ ಗೌರವ ಫ್ರಾನ್ ರಾಜ ನೀತಿತಜ್ಞರಾದ ಜೀನ್ ಬೋಡಿನ್ ರವರಿಗೆ ಸಲ್ಲುತ್ತದೆ. 1576 ರಲ್ಲಿ 'ದಿ ರಿಪಬ್ಲಿಕ್ ರಿಬ್ರಿಸ್' ಎಂಬ ಕೃತಿಯಲ್ಲಿ ಪರಮಾಧಿಕಾರ ಎಂಬ ಪದವನ್ನು ಬಳಸಿದರು.

### *ಪರಮಾಧಿಕಾರಕ್ಕೆ ಎರಡು ಆಯಾಮಗಳಿವೆ.*

1. ಆಂತರಿಕ ಪರಮಾಧಿಕಾರ. (Internal Sovereighty)
2. ಬಾಹ್ಯ ಪರಮಾಧಿಕಾರ. (External Soverighty)

**1) ಆಂತರಿಕ ಪರಮಾಧಿಕಾರ:**

ರಾಜ್ಯದೊಳಗಿನ ಕಾನೂನುಗಳನ್ನು ರೂಪಿಸುವ, ಪ್ರಜೆಗಳನ್ನು ನಿಯಂತ್ರಿಸುವ ಮತ್ತು ತಪ್ಪಿತಸ್ಥರನ್ನು ಶಿಕ್ಷಿಸುವ ರಾಜ್ಯದ ಸರ್ವಶ್ರೇಷ್ಠ ಅಧಿಕಾರವೇ ಆಂತರಿಕ ಪರಮಾಧಿಕಾರ.

**2) ಬಾಹ್ಯ ಪರಮಾಧಿಕಾರ:**

ಒಂದು ರಾಜ್ಯ ಇತರೇ ದೇಶದೊಂದಿಗೆ ವ್ಯವಹರಿಸುವಾಗ ತನ್ನ ನೀತಿ, ನಿಯಮಗಳನ್ನು ಅನುಸರಿಸುವುದಲ್ಲದೆ ಯಾವುದೇ ದೇಶದ ಒತ್ತಡಕ್ಕೆ ಒಳಗಾಗದೆ ತನ್ನ ಹಿತಾಸಕ್ತಿಗೆ

ಅನುಗುಣವಾಗಿ ರೂಪಿಸಿಕೊಳ್ಳುವ ಸರ್ವಶ್ರೇಷ್ಠ ಅಧಿಕಾರವೇ ಬಾಹ್ಯ ಪರಮಾಧಿಕಾರ.

ಉದಾ: 1947 ಆಗಸ್ಟ್ 15 ರ ಪೂರ್ವದಲ್ಲಿ ಬ್ರಿಟಿಷರ ಆಳ್ವಿಕೆಗೆ ಒಳಪಟ್ಟಾಗ ಭಾರತಕ್ಕೆ ಪರಮಾಧಿಕಾರವಿರಲಿಲ್ಲ. 1947 ರ ಆಗಸ್ಟ್ 15 ರ ನಂತರ ಭಾರತ ಸರ್ವತಂತ್ರ, ಸ್ವತಂತ್ರ್ಯ ಮತ್ತು ಸಾರ್ವಭೌಮ ರಾಷ್ಟ್ರವಾಗಿದೆ.

## 3.5 ಪೌರ ಮತ್ತು ಪೌರತ್ವ

ರಾಜ್ಯದಲ್ಲಿ ಶಾಶ್ವತವಾಗಿ ವಾಸಿಸುವ ಪ್ರಜೆಗಳೇ ಪೌರರಾಗಿರುತ್ತಾರೆ. ಇವರು ಅಮೂರ್ತ ರೂಪದ ರಾಜ್ಯಕ್ಕೆ ಮೂರ್ತ ರೂಪವನ್ನು ಕೊಡುವ ಜೀವಂತ ಶಕ್ತಿಗಳಾಗುತ್ತಾರೆ.

ಪ್ರಜೆಗಳಿಗೆ ರಾಜ್ಯವು ಕೆಲವು ಹಕ್ಕುಗಳನ್ನು ನೀಡಿರುತ್ತದೆ. ಇದಕ್ಕೆ ಪ್ರತಿಯಾಗಿ ಪ್ರಜೆಗಳು ಕೆಲವು ಕರ್ತವ್ಯಗಳನ್ನು ನಿರ್ವಹಿಸಬೇಕಾಗುತ್ತದೆ.

### *ಪೌರ ಮತ್ತು ಪೌರತ್ವದ ಅರ್ಥ:*

ಪೌರನನ್ನು ನಾಗರಿಕ ಎಂತಲು ಕರೆಯುತ್ತಾರೆ. ಪೌರ ಅಥವಾ ನಾಗರಿಕ ಎಂಬ ಪದವು ಇಂಗ್ಲೀಷ್ ನ 'ಸಿಟಿಜನ್' ಎಂಬ ಪದದಿಂದ ಬಂದಿದೆ. ಸಿಟಿಜನ್ ಎಂಬ ಪದವು ಸಿಟಿ ಎಂಬ ಪದದಿಂದ ಬಂದಿದೆ. ಸಿಟಿ ಎಂಬ ಪದವು ಲ್ಯಾಟಿನ ಭಾಷೆಯ 'ಸಿವಿಸ್' ಎಂಬ ಪದದಿಂದ ಉತ್ಪತ್ತಿಯಾಗಿದೆ.

'ಸಿಟಿ' ಎಂದರೆ ನಗರ ಅಥವಾ ಪಟ್ಟಣವೆಂತಲೂ ಅಲ್ಲಿ ವಾಸಿಸುವ ಜನರನ್ನು ಸಿಟಿಜನ್ ಎಂದು ಕರೆಯಲಾಗಿದೆ. ಇದನ್ನು ಸಂಕುಚಿತ ಮತ್ತು ವಿಶಾಲ ಅರ್ಥದಲ್ಲಿ ಬಳಸಲಾಗಿದೆ. ಸಂಕುಚಿತ ಅರ್ಥದಲ್ಲಿ ಪುರ ಅಥವಾ ನಗರದಲ್ಲಿ ವಾಸಿಸುವವನೇ "ಪೌರ ಅಥವಾ ನಾಗರೀಕ".

ವಿಶಾಲ ಅರ್ಥದಲ್ಲಿ ಹೇಳುವುದಾದರೆ ಒಂದು ರಾಜ್ಯದ ಭೂ ಪ್ರದೇಶದೊಳಗೆ ವಾಸಿಸುವ ಪ್ರತಿಯೊಬ್ಬ ಪ್ರಜೆಯೂ ರಾಜ್ಯದ ಪೌರನಾಗುತ್ತಾನೆ. ಆದ್ದರಿಂದ ಪೌರ ಎಂದರೆ ಒಂದು ರಾಜ್ಯದ ಸದಸ್ಯ.

ಪೌರತ್ವವೆಂದರೆ ಪ್ರಜೆಯೊಬ್ಬನಿಗಿರುವ ರಾಜ್ಯದ ಸದಸತ್ವವೇ ಪೌರತ್ವ ಎಂದು ಲಾಸ್ಕಿ ವ್ಯಾಖ್ಯಾನಿಸಿದ್ದಾರೆ. ಪೌರತ್ವ ಎಂಬ ಪದವು ಕಾಲದಿಂದ ಕಾಲಕ್ಕೆ ಬದಲಾಗುತ್ತ ಬಂದಿದೆ.

ಪ್ರಾಚೀನ ಗ್ರೀಕ್‌ರ ಕಾಲದಲ್ಲಿ ಪೌರ ಮತ್ತು ಪೌರತ್ವದ ಅರ್ಥವನ್ನು ಪ್ರಥಮವಾಗಿ ಜಗತ್ತಿಗೆ ಪರಿಚಯಿಸಿದ ಕೀರ್ತಿ ಅರಿಸ್ಟಾಟಲ್‌ರಿಗೆ ಸಲ್ಲುತ್ತದೆ. ನಗರ ರಾಜ್ಯಾಡಳಿತದಲ್ಲಿ ಭಾಗವಹಿಸಿದವರನ್ನು ಮಾತ್ರ ಪೌರರೆಂದು ಪರಿಗಣಿಸಿದ್ದರು. ಸ್ತ್ರೀಯರಿಗೆ, ಗುಲಾಮರಿಗೆ, ಶ್ರಮಿಕರಿಗೆ, ನಗರದಿಂದ ಹೊರಗುಳಿದವರಿಗೆ, ರಾಜಕೀಯವಾಗಿ ಪಾಲ್ಗೊಳ್ಳುವಿಕೆಗೆ ಅವಕಾಶವಿರಲಿಲ್ಲ.

ರೋಮನ್ನರ ಕಾಲದಲ್ಲಿ ಸಾಮ್ರಾಜ್ಯವು ಸವಿಸ್ತಾರವಾಗಿದ್ದರಿಂದ ವಿದೇಶಿಯರು ಮತ್ತು ಗುಲಾಮರನ್ನು ಹೊರತುಪಡಿಸಿ ಎಲ್ಲರಿಗೂ ಪೌರತ್ವವನ್ನು ದಯಪಾಲಿಸಲಾಗಿತ್ತು.

ಮಧ್ಯಯುಗದಲ್ಲಿ ಇಂಗ್ಲೆಂಡಿನಲ್ಲಿ ಸರದಾರರು, ಜಮೀನ್ದಾರರು, ಧರ್ಮಗುರುಗಳು ಹಾಗೂ ಪಾಳೆಗಾರರಿಗೆ ಮಾತ್ರ ಪೌರತ್ವವನ್ನು ಕೊಡಲಾಗಿತ್ತು.

ಆಧುನಿಕ ರಾಜ್ಯಗಳು ಭೂ ಪ್ರದೇಶ ಮತ್ತು ಜನಸಂಖ್ಯೆಯಿಂದ ಬೃಹತ್ ಗಾತ್ರದವುಗಳಾಗಿವೆ. ಜನರು ತಮ್ಮ ತಮ್ಮ ಸರಕಾರಗಳ ದೈನಂದಿನ ವ್ಯವಹಾರಗಳಲ್ಲಿ ನೇರವಾಗಿ ಭಾಗವಹಿಸಲು ಉತ್ಸುಕರಾಗಿದ್ದಾರೆ. ಹೀಗಾಗಿ ಸ್ತ್ರೀ-ಪುರುಷ, ಬಡವ-ಶ್ರೀಮಂತ, ಮೇಲು-ಕೀಳೆಂಬ ಬೇಧ ಭಾವವಿಲ್ಲದೆ ಎಲ್ಲರೂ ಪೌರತ್ವಕ್ಕೆ ಭಾಜನರಾಗಿದ್ದಾರೆ.

### *ವ್ಯಾಖ್ಯೆಗಳು:*

**ಅರಿಸ್ಟಾಟಲ್‌ರವರ ಪ್ರಕಾರ:** "ಶಾಸನೀಯ ಕಲಾಪಗಳಲ್ಲಿ ಮತ್ತು ನ್ಯಾಯಾಂಗದ ಆಡಳಿತದಲ್ಲಿ ಭಾಗವಹಿಸುವ ಅಧಿಕಾರವಿರುವರೇ ರಾಜ್ಯದ ಪೌರರು".

**ಡ್ಯೇನಿಯಲ್ ವಿಟ್ ರವರ ಪ್ರಕಾರ:** "ಶಾಸನ ಬದ್ಧವಾದ ಹಕ್ಕುಗಳು ಮತ್ತು ಕರ್ತವ್ಯಗಳನ್ನು ಹೊಂದಿರುವ ರಾಜ್ಯದ ಖಾಯಂ ಸದಸ್ಯರೇ ಪೌರರು."

**ವಾಟಲ್ ರವರ ಪ್ರಕಾರ:** ನಾಗರಿಕ ಸಮಾಜದ ಸದಸ್ಯನಾಗಿದ್ದು, ರಾಜ್ಯದ ಹಕ್ಕು ಮತ್ತು ಕರ್ತವ್ಯಗಳಿಗೆ ಬದ್ಧನಾಗಿದ್ದು ಎಲ್ಲಾ ಸೌಲಭ್ಯಗಳನ್ನು ಸಮಾನವಾಗಿ ಹೊಂದಿರುವವನೇ ಪೌರ".

**ಹೆಚ್. ಜೆ. ಲಾಸ್ಕಿರವರ ಪ್ರಕಾರ:** "ಒಬ್ಬ ವ್ಯಕ್ತಿಯು ಸರ್ವರ ಯೋಗ ಕ್ಷೇಮಕ್ಕಾಗಿ ತನ್ನ ವಿವೇಚನೆಯನ್ನು ಉಪಯೋಗಿಸುವವನೇ ಪೌರ".

### *ಪೌರತ್ವದ ವಿಧಗಳು*

**ಪೌರತ್ವವನ್ನು ಎರಡು ವಿಧಗಳಾಗಿ ವರ್ಗೀಕರಿಸಲಾಗಿದೆ.**

1. ಏಕ ಪೌರತ್ವ (Single Citizenship)
2. ದ್ವಿ ಪೌರತ್ವ (Dual Citizenship)

**1) ಏಕ ಪೌರತ್ವ:**

ಒಬ್ಬ ವ್ಯಕ್ತಿಯು ರಾಷ್ಟ್ರದ ಪೌರತ್ವವನ್ನು ಮಾತ್ರ ಹೊಂದಿದ್ದರೆ ಅದನ್ನು ಏಕ ಪೌರತ್ವ ಎಂದು ಕರೆಯುತ್ತಾರೆ. ಏಕ ಪೌರತ್ವ ಇರುವ ರಾಷ್ಟ್ರಗಳಲ್ಲಿ ವ್ಯಕ್ತಿಯು ತಾನು ಜನಿಸಿದ ಪ್ರಾಂತ್ಯದ ಅಥವಾ ರಾಜ್ಯದ ಪೌರತ್ವವನ್ನು ಹೊಂದಿರುವುದಿಲ್ಲ. ಉದಾಹರಣೆ: ಬ್ರಿಟನ್, ಭಾರತ, ಫ್ರಾನ್ಸ್, ಬಾಂಗ್ಲಾ, ಶ್ರೀಲಂಕ.

**2) ದ್ವಿ ಪೌರತ್ವ:**

ಒಬ್ಬ ವ್ಯಕ್ತಿ ಏಕಕಾಲದಲ್ಲಿ ಎರಡು ಪೌರತತ್ವ ಹೊಂದಿರುವುದನ್ನು ದ್ವಿ ಪೌರತ್ವ ಎಂದು ಕರೆಯುತ್ತಾರೆ. ರಾಷ್ಟ್ರೀಯ ಮತ್ತು ಪ್ರಾಂತೀಯ ಅಥವಾ ಮತ್ತೊಂದು ರಾಷ್ಟ್ರಗಳ

ಪೌರತ್ವವನ್ನು ಹೊಂದಿರಬಹುದಾಗಿದೆ. ಉದಾ: ಅಮೇರಿಕಾ, ಸ್ವಿಟ್ಜರ್ ಲ್ಯಾಂಡ್.

**ಪೌರತ್ವವನ್ನು ಪಡೆಯುವ ವಿಧಾನ**

1. **ಸಹಜ ಪೌರತ್ವ**
   a. ಜನನದ ಮೂಲಕ ಪೌರತ್ವ
   b. ರಕ್ತ ಸಂಬಂಧದ ಮೂಲಕ ಪೌರತ್ವ
2. **ಸಹಜೀಕೃತ ಪೌರತ್ವ**
   a. ವಿವಾಹ
   b. ವಿದೇಶಿ ಸೇವೆ
   c. ವಿದೇಶದಲ್ಲಿ ಆಸ್ತಿ
   d. ದೀರ್ಘಕಾಲ ವಾಸ
   e. ಮನವಿ ಮೂಲಕ

**1) ಸಹಜ ಪೌರತ್ವ**

**ಎ) ಜನನದ ಮೂಲಕ ಪೌರತ್ವ:** ಇದರ ಪ್ರಕಾರ ಪೌರತ್ವ ಮಗುವಿನ ಜನ್ಮ ಸ್ಥಳದ ಆಧಾರದ ಮೇಲೆ ಸಿಗುತ್ತದೆ. ಯಾವ ದೇಶದಲ್ಲಿ ಮಗು ಜನಿಸುತ್ತದೆಯೋ ಆ ದೇಶದ ಪೌರತ್ವವನ್ನು ಹೊಂದುತ್ತದೆ. ಉದಾಹರಣೆ: ಭಾರತದಲ್ಲಿ ಜನನದ ಮೂಲಕ ಪೌರತ್ವ ಪಡೆದುಕೊಳ್ಳುವುದು.

**ಬಿ) ರಕ್ತ ಸಂಬಂಧದ ಮೂಲಕ ಪೌರತ್ವ:** ಇಲ್ಲಿ ಪೌರತ್ವವು ರಕ್ತ ಸಂಬಂಧದ ಆಧಾರದ ಮೇಲೆ ಪೌರತ್ವ ನಿರ್ಧಾರವಾಗುತ್ತದೆ. ಇದರಿಂದ ಒಂದು ಮಗು ಯಾವುದೇ ದೇಶದಲ್ಲಿ ಜನಿಸಲಿ ಅದು ತನ್ನ ತಂದೆ ತಾಯಿ ಯಾವ ರಾಷ್ಟ್ರದ ಪೌರತ್ವವನ್ನು ಹೊಂದಿರುತ್ತಾರೋ ಆ ರಾಷ್ಟ್ರದ ಪೌರತ್ವವನ್ನು ಪಡೆಯುತ್ತದೆ. ಉದಾಹರಣೆ: ಭಾರತದ ದಂಪತಿ ಯಾವುದಾದರೊಂದು ಉದ್ದೇಶದಿಂದ ಅಮೇರಿಕಕ್ಕೆ ಹೋದರೆ ಅಲ್ಲಿ ಮಗು ಜನಿಸಿದರೆ ಆ ಮಗು ಭಾರತದ ಪೌರತ್ವವನ್ನು ಪಡೆಯುತ್ತದೆ. ಏಕೆಂದರೆ ಆ ಮಗುವಿನ ತಂದೆ ತಾಯಿ ಭಾರತೀಯರು.

**2) ಸಹಜೀಕೃತ ಪೌರತ್ವ**

ಓರ್ವ ವ್ಯಕ್ತಿ ಇನ್ನೊಂದು ರಾಷ್ಟ್ರದ ಪೌರತ್ವವನ್ನು ಬಯಸಿದರೆ, ಆ ರಾಷ್ಟ್ರದ ಪೌರತ್ವಕ್ಕಾಗಿ ಅರ್ಜಿ ಸಲ್ಲಿಸಬೇಕು. ಆಗ ಆ ರಾಷ್ಟ್ರ ಕೆಲವು ನಿಯಮಗಳನ್ನು ವಿಧಿಸುತ್ತದೆ. ಈ ನಿಯಮಗಳು ರಾಷ್ಟ್ರದಿಂದ ರಾಷ್ಟ್ರಕ್ಕೆ ಭಿನ್ನವಾಗಿರುತ್ತದೆ. ಈ ಕೆಳಗಿನ ನಿಯಮಗಳು ಎಲ್ಲಾ ದೇಶಗಳಲ್ಲಿ ಸರ್ವೇ ಸಾಮಾನ್ಯವಾದವುಗಳಾಗಿವೆ.

**ಎ) ವಿವಾಹ:** ಓರ್ವ ಮಹಿಳೆ ವಿದೇಶಿಯನ್ನು ಮದುವೆಯಾದರೆ ತಾನು ಮದುವೆಯಾದ ಪತಿಯ ದೇಶದ ಪೌರತ್ವವನ್ನು ಪಡೆಯುತ್ತಾಳೆ.

**ಬಿ) ವಿದೇಶಿ ಸೇವೆಯಲ್ಲಿ ನೇಮಕಾತಿ:** ಒಂದು ರಾಷ್ಟ್ರವು ವಿದೇಶಿ ಪ್ರಜೆಯನ್ನು ಸರ್ಕಾರಿ ಸೇವೆಯಲ್ಲಿ ನೇಮಕ ಮಾಡಿಕೊಂಡರೆ ಅವನು ಆ ದೇಶದ ಪೌರತ್ವ ಪಡೆಯುತ್ತಾನೆ.

**ಸಿ) ವಿದೇಶದಲ್ಲಿ ಆಸ್ತಿ ಗಳಿಕೆ:** ವ್ಯಕ್ತಿಯು ಬೇರೆ ದೇಶದಲ್ಲಿ ಆಸ್ತಿಯನ್ನು ಖರೀದಿಸಿದರೆ ಆಗ ಆ ದೇಶದ ನಿಯಮದ ಪ್ರಕಾರ ಆತನಿಗೆ ಪೌರತ್ವ ನೀಡುತ್ತದೆ. ಉದಾಹರಣೆ: ಮೆಕ್ಸಿಕೋದಲ್ಲಿ ಆಸ್ತಿಯನ್ನು ಖರೀದಿಸಿದರೆ ಅಲ್ಲಿಯ ರೂಢಿಯ ಪ್ರಕಾರ ಮೆಕ್ಸಿಕೋದ ಪೌರತ್ವ ಪಡೆಯುತ್ತಾರೆ.

**ಡಿ) ಅರ್ಜಿ ಸಲ್ಲಿಕೆ ಮೇರೆಗೆ:** ಒಂದು ರಾಷ್ಟ್ರದ ವ್ಯಕ್ತಿ ಇನ್ನೊಂದು ರಾಷ್ಟ್ರದ ಪೌರತ್ವ ಪಡೆಯಲು ಬಯಸಿದರೆ ಅದಕ್ಕೆ ಮನವಿ ಅಥವಾ ಅರ್ಜಿ ಸಲ್ಲಿಸಬಹುದು. ಆದರೆ ಅದಕ್ಕೆ ಸರಿಯಾದ ಕಾರಣಗಳನ್ನು ನೀಡಬೇಕು.

**ಇ) ದೀರ್ಘಕಾಲ ವಾಸ:** ಒಬ್ಬ ವ್ಯಕ್ತಿ ಒಂದು ದೇಶದಲ್ಲಿ ಹೆಚ್ಚು ಕಾಲ ವಾಸಿಸುವುದರಿಂದ ವಾಸಿಸಿದ ದೇಶದ ಪೌರತ್ವ ಪಡೆಯಬಹುದು. ಆದರೆ ಆತನು ಆ ದೇಶದ ಮೂಲ ನಿಬಂಧನೆಗಳನ್ನು ಮತ್ತು ಷರತ್ತುಗಳನ್ನು ಒಪ್ಪಿಕೊಂಡರೆ ಮಾತ್ರ ಪೌರತ್ವ ಪಡೆಯುತ್ತಾನೆ.

## *ಪೌರತ್ವವನ್ನು ಕಳೆದುಕೊಳ್ಳುವ ವಿಧಾನ:*

ವ್ಯಕ್ತಿಯು ಹೇಗೆ ಒಂದು ದೇಶದ ಪೌರತ್ವವನ್ನು ಪಡೆಯುತ್ತಾನೆಯೋ ಹಾಗೆಯೇ ಹಲವಾರು ಕಾರಣಗಳಿಂದ ಪೌರತ್ವವನ್ನು ಕಳೆದುಕೊಳ್ಳಬಹುದು. ದೇಶದಿಂದ ದೇಶಕ್ಕೆ ಪೌರತ್ವ ಕಳೆದುಕೊಳ್ಳುವ ವಿಧಾನ ವಿಭಿನ್ನವಾಗಿರುತ್ತದೆ.

ಎಲ್ಲಾ ದೇಶದಲ್ಲಿ ಸಾಮಾನ್ಯವಾಗಿ ಅನ್ವಯವಾಗುವ ಕಾರಣಗಳು ಈ ಕೆಳಕಂಡಂತಿವೆ.

1) **ವಿವಾಹ:** ಮಹಿಳೆಯೊಬ್ಬರು ವಿದೇಶಿಯೊಬ್ಬನನ್ನು ವಿವಾಹವಾದರೆ ಆಕೆ ತನ್ನ ದೇಶದ ಪೌರತ್ವವನ್ನು ಕಳೆದುಕೊಳ್ಳುತ್ತಾರೆ.

2) **ವಿದೇಶದ ಪೌರತ್ವ ಪಡೆದಾಗ:** ವ್ಯಕ್ತಿಯು ತನ್ನ ಮಾತೃಭೂಮಿಯನ್ನು ತೊರೆದು ವಿದೇಶದಲ್ಲಿ ಧೀರ್ಘಕಾಲ ನೆಲಸಿದರೆ ಆ ದೇಶದ ಪೌರತ್ವ ಪಡೆಯುತ್ತಾನೆ. ಏಕೆಂದರೆ ಒಬ್ಬ ವ್ಯಕ್ತಿ ಎರಡು ದೇಶದ ಪೌರತ್ವ ಪಡೆಯಲು ಸಾಧ್ಯವಿಲ್ಲ. ಆದರೆ ಆ ದೇಶದ ಕಾನೂನಿಗನುಗುಣವಾಗಿ ಒಂದು ದೇಶದ ಪೌರ ಎರಡು ದೇಶದ ಪೌರತ್ವ ಹೊಂದಬಹುದಾಗಿದೆ.

3) **ಅಪರಾಧ**: ದೇಶದ್ರೋಹದಂತಹ ಗಂಭೀರ ಅಪರಾಧ ಎಸಗಿದಾಗ ದೇಶದ ನ್ಯಾಯಾಲಯದಿಂದ ಅಪರಾಧಿ ಎಂದು ಘೋಷಿಸಲ್ಪಟ್ಟು ಶಿಕ್ಷೆಗೆ ಗುರಿಯಾಗಿದ್ದರೆ, ಆ ವ್ಯಕ್ತಿಯು ತನ್ನ ದೇಶದ ಪೌರತ್ವವನ್ನು ಕಳೆದುಕೊಳ್ಳುತ್ತಾನೆ.

4) **ಸೈನ್ಯ ತ್ಯಾಗ:** ಯಾವುದೇ ಸೈನಿಕನು ತನ್ನ ದೇಶದ ಮೇಲೆ ಯುದ್ಧ ನಡೆಯುತ್ತಿರುವ ಸಂದರ್ಭದಲ್ಲಿ ಸೈನ್ಯ ತ್ಯಜಿಸಿ ರಾಷ್ಟ್ರದ ಭದ್ರತೆಗೆ ಅಪಚಾರವನ್ನೆಸಗಿದರೆ ಶಿಕ್ಷೆಗೆ ಗುರಿಯಾಗುವುದರೊಂದಿಗೆ ಪೌರತ್ವವನ್ನು ಕಳೆದುಕೊಳ್ಳುತ್ತಾನೆ.

5) **ವಿದೇಶಿ ಬಿರುದು ಪಡೆದಾಗ:** ವ್ಯಕ್ತಿಯೊಬ್ಬನು ತನ್ನ ರಾಜ್ಯದ ಅನುಮತಿಯಿಲ್ಲದೆ ಅನ್ಯರಾಷ್ಟ್ರದ ಬಿರುದನ್ನು ಪಡೆದರೆ ಆ ವ್ಯಕ್ತಿಯು ತನ್ನ ದೇಶದ ಪೌರತ್ವವನ್ನು ಕಳೆದುಕೊಳ್ಳುತ್ತಾನೆ.

6) **ವಿದೇಶಿ ಸೇವೆಯಲ್ಲಿ ನೇಮಕಾತಿ ಹೊಂದಿದಾಗ:** ಒಂದು ದೇಶದ ಪೌರನು ವಿದೇಶದ ಸರಕಾರಿ ಕೆಲಸಕ್ಕೆ ಸೇರಿದರೆ ಅವನು ತನ್ನ ದೇಶದ ಪೌರತ್ವ ಕಳೆದುಕೊಳ್ಳುತ್ತಾನೆ. ಉದಾಹರಣೆಗೆ ಭಾರತೀಯನೊಬ್ಬ ಅಮೇರಿಕದ ಸರಕಾರಿ ಕೆಲಸಕ್ಕೆ ಸೇರಿದರೆ ಭಾರತದ ಪೌರತ್ವ ಕಳೆದುಕೊಳ್ಳುತ್ತಾನೆ, ಕಾರಣ ಅವನು ಅಮೇರಿಕದ ಸರಕಾರಕ್ಕೆ ನಿಷ್ಠನಾಗಿರಬೇಕಾಗುತ್ತದೆ. ಈ ರೀತಿ ವ್ಯಕ್ತಿಯು ಹಲವಾರು ಕಾರಣಗಳಿಂದ ಪೌರತ್ವವನ್ನು ಪಡೆದುಕೊಳ್ಳಬಹುದು ಮತ್ತು ಕಳೆದುಕೊಳ್ಳಬಹುದಾಗಿದೆ.

## *ಉತ್ತಮ ಪೌರನ ಗುಣಗಳು:*

ಒಬ್ಬ ವ್ಯಕ್ತಿ ಪೌರನೆನಿಸಿಕೊಳ್ಳಬೇಕಾದರೆ ಉತ್ತಮವಾದ ಗುಣಗಳನ್ನು ಹೊಂದಿರಬೇಕು. ಏಕೆಂದರೆ ಪೌರನಿರದಿದ್ದರೆ ರಾಜ್ಯವಿಲ್ಲ. ರಾಜ್ಯವಿಲ್ಲದಿದ್ದರೆ ಪೌರನಿರಲು ಸಾಧ್ಯವಿಲ್ಲ.

**ಅರಿಸ್ಟಾಟಲ್‌ರ**ವರ ಪ್ರಕಾರ: "ಉತ್ತಮ ಗುಣವನ್ನು ಹೊಂದಿರುವ ಪ್ರಜೆಗಳಿಂದ ಉತ್ತಮ ರಾಜ್ಯಕಟ್ಟಲು ಸಾಧ್ಯ ಎಂದಿದ್ದಾರೆ".

**ಲಾರ್ಡ ಬ್ರೈಸ್‌ರವರ ಪ್ರಕಾರ:** "ಉತ್ತಮ ಪೌರನು ಸೂಕ್ಷ್ಮ ಬುದ್ಧಿ, ಆತ್ಮ ಸಂಯಮ ಹಾಗೂ ಆತ್ಮ ಸಾಕ್ಷಿಯನ್ನು ಹೊಂದಿರಬೇಕು ಎಂದಿದ್ದಾರೆ".

**ಉತ್ತಮ ಪೌರನ ಗುಣಲಕ್ಷಣಗಳು ಈ ಕೆಳಗಿನಂತಿವೆ.**

ವಂತರಾಗಿರಬೇಕು.
ಾಗಿರಬೇಕು.
ುಮ ಮತ್ತು ಆತ್ಮ ಸಾಕ್ಷಿಯುಳ್ಳವರಾಗಿರಬೇಕು.
ನಿಕ ಚಟುವಟಿಕೆಯಲ್ಲಿ ಸಕ್ರಿಯವಾಗಿ ಭಾಗವಹಿಸಬೇಕು.
ನೋಭಾವ ಹೊಂದಿರದೆ ಸಮಾಜದ ಉನ್ನತಿಗಾಗಿ ಯಾವ ವಿಧದ ತ್ಯಾಗಕ್ಕೂ ಸಿದ್ಧರಿರಬೇಕು.
ರ್ಮ, ಪ್ರಾಂತ್ಯ, ಪಕ್ಷ, ಮುಂತಾದವುಗಳನ್ನು ಪರಿಗಣಿಸದೆ ಸಮಾಜದ ಹಿತಾಸಕ್ತಿಗೆ ಶ್ರಮಿಸುವ
ು ಮತದಾನದ ಮೂಲಕ ಆಯ್ಕೆ ಮಾಡಬೇಕು.
ಭಿರುಚಿ ಮತ್ತು ರಾಜ್ಯದ ಅಭಿರುಚಿಯ ನಡುವೆ ಭಿನ್ನಾಭಿಪ್ರಾಯ ಉಂಟಾದಾಗ ವೈಯಕ್ತಿಕ
ಂತ ರಾಜ್ಯದ ಹಿತಾಸಕ್ತಿಗಾಗಿ ಶ್ರಮಿಸಬೇಕು.
 ಕಾರ್ಯವೇ ಪರಮ ಶ್ರೇಷ್ಠ ಕಾರ್ಯವೆಂದು ತಿಳಿಯಬೇಕು.
ಷ್ಠರಾಗಿ ಪ್ರಾಮಾಣಿಕವಾಗಿ ಕರ್ತವ್ಯ ನಿರ್ವಹಿಸಬೇಕು.

ಈ ಮೇಲಿನ ಅಂಶಗಳನ್ನು ಪ್ರಜೆಗಳು ಹೊಂದಿದರೆ ಒಂದು ಉತ್ತಮ ರಾಜ್ಯವನ್ನು ಕಟ್ಟಲು ಸಾಧ್ಯವಾಗುತ್ತದೆ.

ರಾಜ್ಯ ಮತ್ತು ಪೌರರ ನಡುವಿನ ಸಂಬಂಧವು ತಾಯಿ ಮಗುವಿನ ಸಂಬಂಧವಾಗಿದೆ. ಪ್ರಜೆಗಳಿಲ್ಲದೆ ರಾಜ್ಯವನ್ನು ಊಹಿಸಲು ಸಾಧ್ಯವಿಲ್ಲ. ಪ್ರಜೆಯೊಬ್ಬ ಪೌರನು ರಾಜ್ಯದ ಅವಿಭಾಜ್ಯ ಅಂಗವಾಗಿದ್ದಾನೆ. ರಾಜ್ಯವಿಲ್ಲದ ಪೌರ ನೀರಿನಿಂದ ಹೊರಬಿದ್ದ ಮೀನಿನಂತೆ ಎಂದು ಹೇಳಬಹುದು.

## ಅಭ್ಯಾಸ

**I. ಒಂದು ವಾಕ್ಯದಲ್ಲಿ ಉತ್ತರಿಸಿ:**

1. ರಾಜ್ಯ ಎಂಬ ಪದವನ್ನು ಮೊಟ್ಟ ಮೊದಲು ಬಳಸಿದವರು ಯಾರು?
2. 'ದಿ ಪ್ರಿನ್ಸ್' ಕೃತಿಯ ಕರ್ತೃ ಯಾರು?
3. ರಾಜ್ಯ ಎಂಬ ಪದದ ಮೂಲಪದ ಯಾವುದು?
4. ರಾಜ್ಯದ ಸರ್ವೋಚ್ಚ ಅಧಿಕಾರ ಯಾವುದು?
5. ಪೌರತ್ವ ಎಂದರೇನು?

**II.** ಎರಡು ಅಥವಾ ಮೂರು ವಾಕ್ಯಗಳಲ್ಲಿ ಬರೆಯಿರಿ:

1. ರಾಜ್ಯವನ್ನು ವ್ಯಾಖ್ಯಾನಿಸಿ?
2. ಸರಕಾರದ ಮೂರು ಅಂಗಗಳಾವುವು?
3. ಪರಮಾಧಿಕಾರ ಎಂದರೇನು?
4. ಏಕ ಪೌರತ್ವ ಎಂದರೇನು?
5. ದ್ವಿ ಪೌರತ್ವ ಎಂದರೇನು?
6. ಮಧ್ಯಯುಗದಲ್ಲಿ ಪೌರತ್ವವನ್ನು ಯಾರಿಗೆ ನೀಡಲಾಗಿತ್ತು?

**III.** ಐದು ಅಥವಾ ಆರು ವಾಕ್ಯಗಳಲ್ಲಿ ಉತ್ತರಿಸಿ:

1. ನಿರ್ದಿಷ್ಟ ಭೂ ಪ್ರದೇಶವನ್ನು ಕುರಿತು ವಿವರಿಸಿ.
2. "ರಾಜ್ಯ ಮತ್ತು ಸರ್ಕಾರ" ಒಂದೇ ಅಲ್ಲ ಸಮರ್ಥಿಸಿ.
3. ಪರಮಾಧಿಕಾರದ ಆಯಾಮಗಳನ್ನು ವಿವರಿಸಿ.
4. ಉತ್ತಮ ಪೌರನ ಗುಣಲಕ್ಷಣಗಳನ್ನು ಪಟ್ಟಿಮಾಡಿ.
5. ಸಹಜ ಪೌರತ್ವವನ್ನು ವಿವರಿಸಿ.

**IV. *ಎಂಟು* ಅಥವಾ ಹತ್ತು ವಾಕ್ಯಗಳಲ್ಲಿ ಉತ್ತರಿಸಿ:**

1. ರಾಜ್ಯದ ಮಹತ್ವವನ್ನು ವಿವರಿಸಿ.
2. ಪೌರತ್ವವನ್ನು ಕಳೆದುಕೊಳ್ಳುವ ವಿಧಾನವನ್ನು ಚರ್ಚಿಸಿ.

ಸಲಹಾತ್ಮಕ ಚಟುವಟಿಕೆಗಳು:

1. ರಾಜ್ಯ ಅಭಿವೃದ್ಧಿಯಲ್ಲಿ ಪೌರನ ಪಾತ್ರವನ್ನು ಚರ್ಚಿಸಿ.

2. ನಿಮ್ಮ ಪ್ರಕಾರ ಉತ್ತಮ ಪೌರನಾಗಲು ಇರಬೇಕಾದ ಗುಣಲಕ್ಷಣಗಳಾವುವು? ಸಹಪಾಠಿಗಳೊಂದಿಗೆ ಚರ್ಚಿಸಿ, ಅಭಿಪ್ರಾಯ ಸಂಗ್ರಹಿಸಿ.

# ಅಧ್ಯಾಯ- 4 ಕಾನೂನು (LAW)

**ಕಲಿಕಾ ಉದ್ದೇಶಗಳು**

1. ಕಾನೂನಿನ ಅರ್ಥವನ್ನು ತಿಳಿಯುವುದು.
2. ಕಾನೂನಿನ ಮಹತ್ವವನ್ನು ಅರಿಯುವುದು.
3. ಕಾನೂನಿನ ವರ್ಗೀಕರಣವನ್ನು ಗುರುತಿಸುವುದು.
4. ನಿತ್ಯ ಜೀವನದಲ್ಲಿ ಕಾನೂನಿನ ಪಾಲನೆಯ ಮಹತ್ವವನ್ನು ಮನನ ಮಾಡಿಕೊಳ್ಳುವುದು.

"ಶ್ರೇಷ್ಠ ವ್ಯಕ್ತಿಯು ಕನಿಷ್ಠ ವ್ಯಕ್ತಿಗೆ ನೀಡುವ ಆಜ್ಞೆಯೇ ಕಾನೂನು" - **ಜಾನ್‌ಆಸ್ಟಿನ್**

## ಪೀಠಿಕೆ:

ರಾಜ್ಯಶಾಸ್ತ್ರದಲ್ಲಿ ಕಾನೂನು ಎಂಬ ಪದ ವಿಶೇಷವಾದ ಅರ್ಥಕೊಡುವ ಪಾರಿಭಾಷಿಕ ಪದವಾಗಿದೆ. ಇದು ರಾಜ್ಯಶಾಸ್ತ್ರದ ಮೂಲಭೂತ ಪರಿಕಲ್ಪನೆ ಎಂದು ಪರಿಗಣಿಸಲಾಗಿದೆ. ಪ್ರತಿಯೊಂದು ರಾಜ್ಯಕ್ಕೂ ಸರಕಾರವೆಂಬ ಸಾಧನಾ ಯಂತ್ರವನ್ನು ಹೊಂದಿರುತ್ತದೆ. ಸರ್ಕಾರವು ಕಾನೂನುಗಳನ್ನು ಅನುಷ್ಠಾನಗೊಳಿಸುವ ಮೂಲಕ ತನ್ನ ಕಾರ್ಯವನ್ನು ನಿರ್ವಹಿಸುತ್ತದೆ.

ರಾಜ್ಯದ ನಿಯಮಗಳು ಹಾಗೂ ನಿಯಂತ್ರಣಗಳೇ ಕಾನೂನುಗಳಾಗಿವೆ. ಈ ಕಾನೂನುಗಳನ್ನು ಜಾರಿಗೆ ತರುವ ಅಧಿಕಾರವಿರುವುದು ಸರ್ಕಾರಕ್ಕೆ ಮಾತ್ರ. ಆಧುನಿಕ ಸರ್ಕಾರಗಳು ತಮ್ಮ ಮೂರು ಅಂಗಗಳಾದ ಶಾಸಕಾಂಗ, ಕಾರ್ಯಾಂಗ, ನ್ಯಾಯಾಂಗಗಳ ಮೂಲಕ ಕಾರ್ಯವನ್ನು ನಿರ್ವಹಿಸುತ್ತವೆ.

## 4.1 ಕಾನೂನಿನ ಅರ್ಥ:

ಕಾನೂನು ಅಥವಾ LAW ಎಂಬ ಪದವು Lag ಎಂಬ ಹಳೆಯ ಟ್ಯುಟಾನಿಕ್ ಭಾಷೆಯ ಮೂಲದಿಂದ ಬಂದಿದೆ. Lag ಎಂದರೆ 'ನಿಶ್ಚಯವಾಗಿಡುವುದು.' 'ಏಕಸಮವಾಗಿ ಜೋಡಿಸುವುದು' ಎಂದರ್ಥ. ಅಂದರೆ ವಿವಿಧ ಅಂಶಗಳನ್ನು ಏಕ ರೀತಿಯಲ್ಲಿ ಜೋಡಿಸುವುದು ಎಂದಾಗುತ್ತದೆ.

ಕಾನೂನುಗಳು ರಾಜ್ಯದ ಜನರ ಬಾಹ್ಯ ವರ್ತನೆಯನ್ನು ನಿಯಂತ್ರಿಸಿ ಶಾಂತಿಯನ್ನು ನೆಲೆಗೊಳಿಸುತ್ತವೆ. ಸಮಾಜದ ಆಚಾರ ವಿಚಾರಗಳು, ರೂಢಿ ಸಂಪ್ರದಾಯಗಳು ಕಾನೂನಿಗೆ ತಳಹದಿಯಾಗಿವೆ. ಕಾನೂನುಗಳು ಲಿಖಿತ, ಸ್ಪಷ್ಟ, ನಿರ್ಧಿಷ್ಟ ಹಾಗೂ ಸಾರ್ವತ್ರೀಕವಾಗಿರುತ್ತವೆ.

**ವ್ಯಾಖ್ಯೆಗಳು:**

**1) ಓಪನ್ ಹ್ಯಾಮ್ ರವರ ಪ್ರಕಾರ:** “ಮಾನವನ ವರ್ತನೆಗೆ ಸಂಬಂಧಿಸಿದ ನಿಯಮಗಳೇ ಕಾನೂನು”.

**2) ಪ್ರೊ. ಹಾಲೆಂಡ್ ರವರ ಪ್ರಕಾರ:** “ಮಾನವನ ಬಾಹ್ಯ ಚಟುವಟಿಕೆಯನ್ನು ನಿಯಂತ್ರಿಸಿರುವ ಸಾಮಾನ್ಯ ನಿಯಮಗಳೇ ಕಾನೂನು”.

**3) ಟಿ. ಎಚ್. ಗ್ರೀನ್ ರವರ ಪ್ರಕಾರ:** “ರಾಜ್ಯ ಜಾರಿಗೆ ತರುವ ಹಕ್ಕು ಮತ್ತು ಕರ್ತವ್ಯಗಳ ವ್ಯವಸ್ಥೆಯೇ ಕಾನೂನು”.

**4) ವುಡ್ರೊ ವಿಲ್ಸನ್ ರವರ ಪ್ರಕಾರ:** “ಆಚಾರ ವಿಚಾರಗಳ ಬಳುವಳಿಯಾಗಿ ಸಾಂಪ್ರದಾಯಕವಾಗಿ ಅಂಗೀಕೃತವಾದ ಏಕ ಪ್ರಕಾರದ ನಿಯಮಗಳೇ ಕಾನೂನುಗಳು”.

ಒಟ್ಟಿನಲ್ಲಿ ಮಾನವನ ವರ್ತನೆಯನ್ನು ಪರಿವರ್ತಿಸುವ ಸಮಾಜದಿಂದ ಅಂಗೀಕೃತವಾದ ರಾಜ್ಯದ ನಿಯಮಗಳೇ ಕಾನೂನು ಎಂದು ಕರೆಯಬಹುದು.

## 4.2 ಕಾನೂನಿನ ಮಹತ್ವ:

ಅರಿಸ್ಟಾಟಲ್ ಅಭಿಪ್ರಾಯದಂತೆ “ಮಾನವ ಸಮಾಜಜೀವಿ, ಪರಸ್ಪರ ನಿಯಮಗಳ ನಿರ್ಭಂದವಿಲ್ಲದಿದ್ದರೆ ಅವನು ಪ್ರಾಣಿಗಿಂತಲೂ ಕೀಳು. ಈ ಹೇಳಿಕೆಯ ಹಿನ್ನೆಲೆಯಲ್ಲಿ ಗಮನಿಸುವುದಾದರೆ ಕಾನೂನಿನ ಮಹತ್ವ ಅಪಾರವಾದದ್ದಾಗಿದೆ.

**ಕಾನೂನಿನ ಮಹತ್ವವನ್ನು ಈ ಕೆಳಕಂಡ ಅಂಶಗಳಿಂದ ತಿಳಿಯಬಹುದು.**

1. ಘರ್ಷಣೆಯನ್ನು ತಡೆಯುತ್ತದೆ:

   ಮಾನವ ಸ್ವಭಾವತ: ಕಲಹಪ್ರಿಯ. ಕಾನೂನುಗಳು ಇಲ್ಲದಿದ್ದರೆ ಮಾನವ ಘರ್ಷಣೆಯಲ್ಲಿ ತೊಡಗುತ್ತಾನೆ. ಕಾನೂನುಗಳಿದ್ದರೆ ಮಾನವನ ಬಾಹ್ಯ ವರ್ತನೆಯನ್ನು ನಿಯಂತ್ರಿಸಿ ಘರ್ಷಣೆಯನ್ನು ತಡೆಯುತ್ತದೆ.

2. ಸಮಾಜದಲ್ಲಿ ಶಾಂತಿ ಸುವ್ಯವಸ್ಥೆ ಕಾಪಾಡಲು ನೆರವಾಗುತ್ತದೆ:

   ಸಮಾಜದಲ್ಲಿ ಕಾನೂನುಗಳು ಇಲ್ಲದಿದ್ದರೆ ಅಶಾಂತಿ ಉಂಟಾಗುತ್ತದೆ. ಕಾನೂನುಗಳ ದಕ್ಷ ಅನುಷ್ಠಾನ ಮತ್ತು ಪರಿಪಾಲನೆಯಿಂದ ಶಾಂತಿ ನೆಲೆಸುತ್ತದೆ. ಕಾನೂನು ಸುವ್ಯವಸ್ಥೆಗೆ ಭಂಗ ತರುವವರನ್ನು ಕಾನೂನೇ ಶಿಕ್ಷಿಸುತ್ತದೆ. ಆದ್ದರಿಂದ ರಾಜ್ಯ ಸಮಸ್ತ ಪ್ರಜೆಗಳೆಲ್ಲರೂ ಕಾನೂನಿಗೆ ವಿಧೆಯತೆ ತೋರುತ್ತಾರೆ.

3. ಸಮಾಜ ದ್ರೋಹಿ ಚಟುವಟಿಕೆಗಳನ್ನು ತಡೆಯುತ್ತದೆ:

   ಸಮಾಜದಲ್ಲಿ ಕೊಲೆ, ಸುಲಿಗೆ, ಕಳ್ಳತನ ದರೋಡೆಗಳಂತಹ ಸಮಾಜದ್ರೋಹಿ ಚಟುವಟಿಕೆಗಳನ್ನು ನಿಯಂತ್ರಿಸುವಲ್ಲಿ ಕಾನೂನು ಅತ್ಯಂತ ಅವಶ್ಯಕವಾಗಿದೆ.

4. ವ್ಯಕ್ತಿತ್ವ ವಿಕಾಸಕ್ಕೆ ಕಾನೂನು ಅವಶ್ಯಕ:

   ರಾಜ್ಯದಲ್ಲಿ ಶಾಂತಿ ಸುವ್ಯವಸ್ಥೆ, ಸಾಮಾಜಿಕ ಹಿತಾಸಕ್ತಿಯನ್ನು ಕಾನೂನಿನ ಮೂಲಕ ಕಾಪಾಡುವುದರಿಂದ ವ್ಯಕ್ತಿಯ ವ್ಯಕ್ತಿತ್ವ ವಿಕಾಸ ಸಾಧ್ಯವಿದೆ.

5. ಸ್ವಾತಂತ್ರ್ಯ ಮತ್ತು ಸಮಾನತೆಯನ್ನು ಕಾಪಾಡುತ್ತದೆ:

   ರಾಷ್ಟ್ರದ ಹಾಗೂ ವ್ಯಕ್ತಿಯ ಸ್ವಾತಂತ್ರ್ಯವನ್ನು ರಕ್ಷಿಸುವಲ್ಲಿ ಕಾನೂನು ಪ್ರಮುಖ ಪಾತ್ರ ವಹಿಸುತ್ತದೆ. ವ್ಯಕ್ತಿ ವ್ಯಕ್ತಿಗಳ ನಡುವಿನ ಮೇಲು-ಕೀಳು ಭಾವನೆಗಳು, ಬಡವ-ಶ್ರೀಮಂತ ಎಂಬ ಅಂತರವನ್ನು ಕಡಿಮೆ ಮಾಡಲು ಕಾನೂನು ಮಹತ್ವ ಪಡೆದಿದೆ.

6. ಹಕ್ಕು ಮತ್ತು ಕರ್ತವ್ಯಗಳಿಗೆ ರಕ್ಷಣೆ ನೀಡುತ್ತದೆ:

   ಪ್ರಜೆಗಳಿಗೆ ನೀಡಿರುವ ಮೂಲಭೂತ ಹಾಗೂ ಸಾಮಾನ್ಯ ಹಕ್ಕುಗಳಿಗೆ ಚ್ಯುತಿ ಬಾರದಂತೆ ಕಾನೂನು ರಕ್ಷಣೆ ನೀಡುತ್ತದೆ. ಅಲ್ಲದೆ ಪ್ರಜೆಗಳು ರಾಷ್ಟ್ರಕ್ಕೆ ಸಮಾಜಕ್ಕೆ ಸಲ್ಲಿಸುವ ಕರ್ತವ್ಯಗಳನ್ನು ಕಾನೂನು ನೆನಪಿಸುತ್ತದೆ.

ಒಟ್ಟಿನಲ್ಲಿ, ಕಾನೂನು ಸಾರ್ವತ್ರಿಕವಾಗಿರುವುದರಿಂದ ರಾಜ್ಯ ಮತ್ತು ಪ್ರಜೆಗಳ ಬಾಹ್ಯ ಹಾಗೂ ಆಂತರಿಕ ವರ್ತನೆಗಳು ಕಾನೂನುಗಳನ್ನು ಅವಲಂಬಿಸಿವೆ.

## 4.3 ಕಾನೂನಿನ ವಿಧಗಳು:

ಕಾನೂನು

1. ರಾಷ್ಟ್ರೀಯ ಕಾನೂನು
   a. ಸಂವಿಧಾನಾತ್ಮಕ ಕಾನೂನು
   b. ಸಾಧಾರಣ ಕಾನೂನು
      i. ಸಾರ್ವತ್ರಿಕ ಕಾನೂನು
      ii. ಖಾಸಗಿ ಕಾನೂನು
         a. ಆಡಳಿತಾತ್ಮಕ ಕಾನೂನು
         b. ಅಪರಾಧಿಕಾ ಕಾನೂನು

ii. ಅಂತರ್ ರಾಷ್ಟ್ರೀಯ ಕಾನೂನು

1. **ರಾಷ್ಟ್ರೀಯ ಕಾನೂನು: (National Law)**

   ರಾಜ್ಯದ ವ್ಯಾಪ್ತಿಯೊಳಗೆ ವ್ಯಕ್ತಿಗಳ ಮತ್ತು ಸಂಘ-ಸಂಸ್ಥೆಗಳ ವರ್ತನೆಯನ್ನು ನಿಯಂತ್ರಿಸುವ ಕಾನೂನೇ ರಾಷ್ಟ್ರೀಯ ಕಾನೂನು. ಕಾನೂನನ್ನು ಆ ದೇಶದ ಶಾಸನ ಸಭೆ

ರಚನೆ ಮಾಡುತ್ತದೆ. ಈ ಕಾನೂನಿಗೆ ಪರಮಾಧಿಕಾರದ ಬೆಂಬಲವಿರುವುದರಿಂದ ಉಲ್ಲಂಘಿಸಿದರೆ ಶಿಕ್ಷಿಸುವ ಅಧಿಕಾರ ರಾಜ್ಯಕ್ಕಿದೆ. ರಾಷ್ಟ್ರೀಯ ಕಾನೂನನ್ನು ಪ್ರತಿಯೊಬ್ಬರು ಪಾಲಿಸುವುದು ಕಡ್ಡಾಯ. ರಾಷ್ಟ್ರೀಯ ಕಾನೂನು ಖಾಸಗಿ ಹಾಗೂ ಸಾರ್ವಜನಿಕ ಕಾನೂನುಗಳೆರಡನ್ನು ಹೊಂದಿದೆ.

2. **ಸಂವಿಧಾನಾತ್ಮಕ ಕಾನೂನು: (Constitutional Law)**

ಒಂದು ರಾಷ್ಟ್ರದ ಸಂವಿಧಾನದಲ್ಲಿ ಅಡಕವಾಗಿರುವ ನಿಯಮಗಳೇ ಸಂವಿಧಾನಾತ್ಮಕ ಕಾನೂನು. ಈ ಕಾನೂನು ಒಂದು ರಾಷ್ಟ್ರದ ಮೂಲಭೂತ ಕಾನೂನಾಗಿದೆ. ಮೆಕೆವರ್‌ರವರ ಪ್ರಕಾರ: "ರಾಷ್ಟ್ರದ ಸರ್ವಶ್ರೇಷ್ಠ ಶಾಸನವೇ ಸಂವಿಧಾನಾತ್ಮಕ ಕಾನೂನು. ಸಂವಿಧಾನಾತ್ಮಕ ಕಾನೂನು ಲಿಖಿತ ರೂಪದಲ್ಲಿರಬಹುದು ಅಥವಾ ಅಲಿಖಿತ ರೂಪದಲ್ಲಿರಬಹುದು. ಈ ಕಾನೂನು ಐತಿಹಾಸಿಕ ವಿಕಸನದ ಫಲವಾಗಿ ಅಥವಾ ಸಂವಿಧಾನ ರಚನಾ ಸಭೆಯಿಂದ ರಚಿಸಲ್ಪಟ್ಟಿರುತ್ತದೆ."

**3) ಸಾಧಾರಣ ಕಾನೂನು: (Ordinary Law)**

ರೂಢಿ, ಸಂಪ್ರದಾಯ, ಪದ್ಧತಿಗಳನ್ನು ಆಧರಿಸಿ ರೂಪುಗೊಂಡಿರುವ ಕಾನೂನೇ ಸಾಧಾರಣ ಕಾನೂನು. ಈ ಕಾನೂನುಗಳು ರಾಜ್ಯದ ಶಾಸನ ಸಭೆಗಳಿಂದ ರಚನೆಯಾಗುತ್ತವೆ. ರಾಜ್ಯದ ನ್ಯಾಯಾಲಯಗಳು ಈ ಕಾನೂನುಗಳಿಗೆ ಮಾನ್ಯತೆಯನ್ನು ನೀಡುತ್ತವೆ. ಉದಾಹರಣೆ: ಬ್ರಿಟನ್, ಭಾರತ

**4) ಸಾರ್ವಜನಿಕ ಕಾನೂನು: (Public Law)**

ರಾಜ್ಯ ಮತ್ತು ಪ್ರಜೆಗಳ ಸಂಬಂಧವನ್ನು ಸ್ಪಷ್ಟಪಡಿಸಿ ನಿಯಂತ್ರಿಸುವ ಕಾನೂನೇ ಸಾರ್ವಜನಿಕ ಕಾನೂನು. ಈ ಕಾನೂನು ಸಾಮಾನ್ಯವಾಗಿ ಪ್ರಜೆಗಳ ಹಿತದೃಷ್ಟಿಯಿಂದ ರಚನೆಯಾಗುತ್ತವೆ ಮತ್ತು ರಾಜ್ಯದ ಹೆಸರಿನಲ್ಲಿ ಈ ಕಾನೂನು ಜಾರಿಗೊಳ್ಳುತ್ತವೆ.

**5) ಖಾಸಗಿ ಕಾನೂನು: (Private Law)**

ವ್ಯಕ್ತಿ-ವ್ಯಕ್ತಿಗಳ ನಡುವಣ ಸಂಬಂಧಕ್ಕೆ ಸಂಬಂಧಿಸಿದ ನಿಯಮಗಳೇ ಖಾಸಗಿ ಕಾನೂನು. ಈ ಕಾನೂನು ಪ್ರಜೆಗಳು ಶಾಂತಿಯುತ ನಾಗರಿಕ ಜೀವನ ನಡೆಸಲು ಸಹಕಾರಿಯಾಗಿವೆ. ವ್ಯಾಪಾರ ಮತ್ತು ಒಪ್ಪಂದದ ಕಾನೂನು, ಆಸ್ತಿಯ ವಾರಸುದಾರತ್ವಕ್ಕೆ ಅಥವಾ ಉತ್ತರಾಧಿಕಾರದ ಕಾನೂನುಗಳೇ ಖಾಸಗಿ ಕಾನೂನುಗಳಿಗೆ ಕೆಲವು ಉದಾಹರಣೆಗಳಾಗಿವೆ.

**6) ಆಡಳಿತಾತ್ಮಕ ಕಾನೂನು: (Administrative Law)**

ಸರ್ಕಾರ ಮತ್ತು ಸರ್ಕಾರಿ ನೌಕರರ ನಡುವಣ ಸಂಬಂಧವನ್ನು ನಿಯಂತ್ರಿಸುವ ಕಾನೂನೇ ಆಡಳಿತಾತ್ಮಕ ಕಾನೂನು. ರಾಜ್ಯದ ಸೇವಾ ಸಿಬ್ಬಂದಿ ವರ್ಗದ ಅಧಿಕಾರಿಗಳು ಅವರ ಅಧಿಕಾರ ಹಾಗೂ ಕರ್ತವ್ಯಕ್ಕೆ ಸಂಬಂಧಿಸಿದ್ದಾಗಿದೆ. ಉದಾಹರಣೆಗೆ: ಫ್ರಾನ್ಸ್ ದೇಶ.

**7) ಅಪರಾಧಿಕಾ ಕಾನೂನು: (Criminal Law)**

ಕೊಲೆ, ಸುಲಿಗೆ, ಕಳ್ಳತನದಂತಹ ಅಪರಾಧಗಳ ನಿಯಂತ್ರಣ ಮತ್ತು ಶಿಕ್ಷೆಗೆ ಸಂಬಂಧಿಸಿದ ನಿಯಮಗಳ ಸಂಕಲನವೇ ಅಪರಾಧಿಕಾ ಕಾನೂನು. ಈ ಕಾನೂನುಗಳು ಸಮಾಜದಲ್ಲಿ ಶಾಂತಿಯುತ ಹಾಗೂ ನಿರ್ಭಯವಾಗಿ ಜೀವನ ನಡೆಸಲು ಸಹಾಯಕವಾಗಿವೆ.

**8) ಅಂತರರಾಷ್ಟ್ರೀಯ ಕಾನೂನು. (International Law)**

ರಾಷ್ಟ್ರ-ರಾಷ್ಟ್ರಗಳ ನಡುವಣ ಸಂಬಂಧವನ್ನು ನಿಯಂತ್ರಿಸಿ ನಿರ್ದೇಶಿಸುವ ನಿಯಮಗಳೇ ಅಂತರರಾಷ್ಟ್ರೀಯ ಕಾನೂನುಗಳು. ಈ ಕಾನೂನುಗಳಿಗೆ ಪರಮಾಧಿಕಾರದ ಬೆಂಬಲವಿಲ್ಲ. ಆದರೂ ರಾಷ್ಟ್ರ-ರಾಷ್ಟ್ರಗಳ ನಡುವಣ ಒಪ್ಪಂದ, ಸಮ್ಮೇಳನ, ಸಂಸ್ಥೆಗಳಲ್ಲಿ ಕೈಗೊಂಡ ನಿರ್ಣಯಗಳೇ ಈ ಕಾನೂನುಗಳಿಗೆ ಆಧಾರವಾಗಿವೆ.

ಕಾನೂನು ರಾಜ್ಯದ ಇಚ್ಛೆಯ ಪರಮೋಚ್ಚವೂ, ಅನಿರ್ಬಂಧಿತವು ಆದಂತಹ ಪ್ರಮುಖ ಪರಿಕಲ್ಪನೆಯಾಗಿದೆ. ರಾಜ್ಯಶಾಸ್ತ್ರದಲ್ಲಿ ಕಾನೂನು ಅತ್ಯಂತ ಮಹತ್ವವಾಗಿದ್ದು, ಅನೇಕ ವಿಧದ ಕಾನೂನುಗಳು ರಾಜ್ಯದಲ್ಲಿ ಅಸ್ತಿತ್ವದಲ್ಲಿವೆ. ಇಂತಹ ಕಾನೂನುಗಳಿಲ್ಲದ ರಾಜ್ಯವನ್ನು ಊಹಿಸಲು ಸಾಧ್ಯವಿಲ್ಲ.

## ಅಭ್ಯಾಸ

**I. ಒಂದು ವಾಕ್ಯಗಳಲ್ಲಿ ಉತ್ತರಿಸಿರಿ:**

1. ಕಾನೂನಿನ ಮೂಲ ಪದ ಯಾವುದು?
2. ಕಾನೂನು ಎಂದರೇನು?
3. ಖಾಸಗಿ ಕಾನೂನು ಎಂದರೇನು?
4. ಸಾಧಾರಣ ಕಾನೂನು ಎಂದರೇನು?
5. ರಾಷ್ಟ್ರದ ಮೂಲಭೂತ ಕಾನೂನು ಯಾವುದು?
6. ಆಡಳಿತಾತ್ಮಕ ಕಾನೂನು ಎಂದರೇನು?

**II. ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ:**

1. ಕಾನೂನಿನ ಎರಡು ವಿಧಗಳನ್ನು ತಿಳಿಸಿ.
2. ಸಂವಿಧಾನಾತ್ಮಕ ಕಾನೂನು ಎಂದರೇನು?
3. ಅಪರಾಧಿಕ ಕಾನೂನು ಎಂದರೇನು?
4. ಅಂತರರಾಷ್ಟ್ರೀಯ ಕಾನೂನು ಎಂದರೇನು?

**III. ಐದು ಅಥವಾ ಆರು ವಾಕ್ಯಗಳಲ್ಲಿ ಉತ್ತರಿಸಿ:**

1. ಕಾನೂನಿನ ಎರಡು ವ್ಯಾಖ್ಯೆಗಳನ್ನು ಬರೆಯಿರಿ.
2. ಸಂವಿಧಾನಾತ್ಮಕ ಕಾನೂನಿನ ಬಗ್ಗೆ ಟಿಪ್ಪಣಿ ಬರೆಯಿರಿ.
3. ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಕಾನೂನಿಗಿರುವ ವ್ಯತ್ಯಾಸಗಳನ್ನು ತಿಳಿಸಿ.
4. ಸಾರ್ವಜನಿಕ ಹಾಗೂ ಖಾಸಗಿ ಕಾನೂನಿಗಿರುವ ವ್ಯತ್ಯಾಸಗಳನ್ನು ಪಟ್ಟಿಮಾಡಿ.

**IV. ಎಂಟು ಅಥವಾ ಹತ್ತು ವಾಕ್ಯಗಳಲ್ಲಿ ಉತ್ತರಿಸಿ:**

1. ಕಾನೂನಿನ ಮಹತ್ವವನ್ನು ತಿಳಿಸಿ.
2. ಕಾನೂನಿನ ವರ್ಗೀಕರಣವನ್ನು ವಿವರಿಸಿ.

**ಸಲಹಾತ್ಮಕ ಚಟುವಟಿಕೆ:**

ಕಾನೂನು ರಚನಾ ವಿಧಾನದ ವಿವಿಧ ಹಂತಗಳನ್ನು ಶಿಕ್ಷಕರ ಸಹಾಯದಿಂದ ತಿಳಿದುಕೊಂಡು ನಿಯೋಜಿತ ಕಾರ್ಯ ಪ್ರಬಂಧ ಬರೆಯಿರಿ.

## ಅಧ್ಯಾಯ- 5 ಸ್ವಾತಂತ್ರ್ಯ(Liberty)

ಕಲಿಕಾ ಉದ್ದೇಶಗಳು:

1. ಸ್ವಾತಂತ್ರ್ಯದ ಅರ್ಥವನ್ನು ಅರಿಯುವುದು
2. ಸ್ವಾತಂತ್ರದ ಮಹತ್ವವನ್ನು ತಿಳಿಯುವುದು
3. ಸ್ವಾತಂತ್ರ್ಯದ ವಿಧಗಳನ್ನು ಗುರುತಿಸುವುದು.
4. ನಿತ್ಯಜೀವನದಲ್ಲಿ ಸ್ವಾತಂತ್ರ್ಯದ ಅಗತ್ಯತೆಯನ್ನು ಮನನ ಮಾಡಿಕೊಳ್ಳುವುದು.

**ತಂತಿ ವಾದ್ಯವೇ ಲೇಸು**

**ಮಂತ್ರಿಯ ಕಳೆ ಲೇಸು**

**ಜಗದಿ ಸ್ವಾತಂತ್ರ್ಯವೇ ಲೇಸು**. - ಸರ್ವಜ್ಞ

**ಮಾನವರು ಸ್ವತಂತ್ರವಾಗಿ ಹುಟ್ಟುತ್ತಾರೆ ಮತ್ತು ಸ್ವತಂತ್ರವಾಗಿಯೇ ಮುಂದುವರಿಯುತ್ತಾರೆ. ಫ್ರಾನ್ಸ್‌ದೇಶದ ರಾಷ್ಟ್ರೀಯ ಸಭೆಯ ಘೋಷಣೆ.**

### ಪೀಠಿಕೆ:

ಸ್ವಭಾವತಃ ಮಾನವ ಸ್ವತಂತ್ರ ಪ್ರಿಯ ಜೀವಿ. ಸ್ವಾತಂತ್ರ್ಯವಿಲ್ಲದೆ ಯಾವ ವ್ಯಕ್ತಿಯ ವ್ಯಕ್ತಿತ್ವ ವಿಕಾಸವಾಗಲಾರದು. ಆದ್ದರಿಂದಲೇ ಸ್ವಾತಂತ್ರ್ಯವೆಂಬುದು ಸಮಸ್ತ ಮನುಕುಲದ ಸರ್ವಕಾಲಿಕ ಬೇಡಿಕೆಯಾಗಿದೆ. ವ್ಯವಸ್ಥೆಗಳು ವ್ಯಕ್ತಿ ಸ್ವಾತಂತ್ರ್ಯದ ಮೇಲೆ ನಿರ್ಬಂಧನೆಗಳನ್ನು ಹೇರಿ ದಬ್ಬಾಳಿಕೆಯನ್ನು ಮಾಡಿದಾಗಲೆಲ್ಲಾ ಮಾನವನು ಸಾಂಘಿಕವಾಗಿ ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದ ಜ್ವಲಂತ ಉದಾಹರಣೆಗಳು ಇತಿಹಾಸದ ಪುಟಗಳಲ್ಲಿ ಸುವರ್ಣಾಕ್ಷರಗಳಿಂದ ಬರೆಯಲ್ಪಟ್ಟಿವೆ.

ಮಾನವನ ಸರ್ವತೋಮುಖ ವ್ಯಕ್ತಿತ್ವದ ವಿಕಾಸಕ್ಕೆ ಸ್ವಾತಂತ್ರ್ಯವು ಅಗತ್ಯ. ಸ್ವಾತಂತ್ರ್ಯವಿಲ್ಲದೆ ಸಾಧನೆಗೈಯುವದು ಸಾಧ್ಯವಿಲ್ಲ. ನಿರ್ಬಂಧರಹಿತ ಸ್ವಾತಂತ್ರ್ಯವು ಸಮಸ್ಯೆಗಳನ್ನು ಸೃಷ್ಟಿಸುತ್ತದೆ. ಆದ್ದರಿಂದ ಅನಿರ್ಬಂಧಿತ ಸ್ವಾತಂತ್ರ್ಯವು ನಾಗರಿಕ ಸಮಾಜದಲ್ಲಿ ಸಾಧ್ಯವಿಲ್ಲ. ಸಾಮಾಜಿಕವಾಗಿ ಅಂಗೀಕೃತವಾದ ನಿರ್ಬಂಧಗಳು ಅಗತ್ಯವಾಗಿರುತ್ತವೆ. ಮಾನವನು ಸಂಘಜೀವಿಯಾಗಿದ್ದು ಇತರರೊಂದಿಗೆ ಜೀವಿಸುವುದರಿಂದ, ಕೆಲವೊಂದು ನಿಬಂಧನೆ ಮತ್ತು ನಿಯಮಗಳಿಗೆ ಒಳಗಾಗಬೇಕಾಗುತ್ತದೆ. ರಾಜ್ಯವು ಕಾನೂನುಗಳ ಮೂಲಕ ಸ್ವಾತಂತ್ರ್ಯವನ್ನು ನಿರ್ಬಂಧಿಸುತ್ತದೆ. ಕಾನೂನುಗಳು ಸ್ವಾತಂತ್ರ್ಯಕ್ಕೆ ರಕ್ಷಣೆ ಕೊಡುವಂತಿರಬೇಕೆ ಹೊರತು ಅವುಗಳನ್ನು ಕಸಿದುಕೊಳ್ಳುವಂತಿರಬಾರದು. ಉದಾಹರಣೆಗೆ ದ್ವಿಚಕ್ರ (ಶಿರವಾಚಕ) ವಾಹನ ಓಡಿಸುವಾಗ ಹೆಲ್ಮೆಟ್ (ಶಿರಕವಚ) ಧರಿಸಬೇಕು. ವಾಹನಗಳನ್ನು ರಸ್ತೆಯ ಎಡಭಾಗದಲ್ಲಿಯೇ ಓಡಿಸಬೇಕು ಎಂಬ ಕೆಲವು ರಸ್ತೆ ಸುರಕ್ಷತಾ ಕಾನೂನುಗಳನ್ನು ಅನುಸರಿಸದಿದ್ದರೆ ಜೀವಕ್ಕೆ ಅಪಾಯವಾಗುತ್ತದೆ.

## 5.1 ಸ್ವಾತಂತ್ರ್ಯದ ಅರ್ಥ

ಸ್ವಾತಂತ್ರ್ಯ ಅಥವಾ 'ಲಿಬರ್ಟಿ' ಎಂಬ ಪದವು ಲಾಟಿನ್ ಭಾಷೆಯ 'ಲಿಬರ್' ಎಂಬುದರಿಂದ ಬಂದಿದೆ. ಲಿಬರ್ ಎಂದರೆ **ಮುಕ್ತವಾಗಿರುವುದು, ನಿರ್ಬಂಧರಹಿತವಾಗಿರುವುದು** ಎಂಬ ಅರ್ಥವನ್ನು ನೀಡುತ್ತದೆ. ಅಂದರೆ ಎಲ್ಲ ಬಗೆಯ ಸಂಕೋಲೆಗಳಿಂದ ಮುಕ್ತವಾಗುವುದೇ ಸ್ವಾತಂತ್ರ್ಯವಾಗಿರುತ್ತದೆ.

ಸ್ವಾತಂತ್ರ್ಯದ ಪರಿಕಲ್ಪನೆ ಕುರಿತು ರಾಜ್ಯಶಾಸ್ತ್ರಜ್ಞರು ತಮ್ಮದೇ ಆದ ವ್ಯಾಖ್ಯೆಗಳನ್ನು ನೀಡಿದ್ದಾರೆ. ಅವುಗಳೆಂದರೆ:

**ಬರ್ನ್ ರವರ ಪ್ರಕಾರ:** "ವ್ಯಕ್ತಿಯೊಬ್ಬನಿಗೆ ತನ್ನ ಸಾಮರ್ಥ್ಯಕ್ಕೆ ಅನುಗುಣವಾಗಿ ಅಭಿವೃದ್ಧಿ ಹೊಂದಲು ಇರುವ ಅವಕಾಶವೇ ಸ್ವಾತಂತ್ರ್ಯ".

**ಎಚ್. ಜೆ. ಲಾಸ್ಕಿಯುವರ ಪ್ರಕಾರ:** "ವ್ಯಕ್ತಿಯ ಸಂತುಷ್ಟ ಜೀವನಕ್ಕೆ ಅನುಕೂಲಕರವಾದ ವಾತಾವರಣವನ್ನು ಕಲ್ಪಿಸಿ, ಆ ಮಾರ್ಗದಲ್ಲಿರುವ ಅಡೆತಡೆಗಳನ್ನು ತೆಗೆದುಹಾಕುವುದೇ ನೈಜ ಸ್ವಾತಂತ್ರ್ಯ".

**ಪ್ರೊ. ಜಿ. ಡಿ. ಎಚ್. ಕೋಲ್ ರವರ ಪ್ರಕಾರ:** "ಬಾಹ್ಯ ಅಡೆತಡೆಗಳಿಲ್ಲದೆ ತನ್ನ ವ್ಯಕ್ತಿತ್ವವನ್ನು ವಿಕಾಸಪಡಿಸಿಕೊಳ್ಳಲು ವ್ಯಕ್ತಿಗೆ ಇರುವ ಅವಕಾಶಗಳೇ ಸ್ವಾತಂತ್ರ್ಯ".

ಮೇಲ್ಕಂಡ ವ್ಯಾಖ್ಯೆಗಳ ಆಧಾರದ ಮೇಲೆ ಹೇಳುವುದಾದರೆ ಎಲ್ಲಾ ಮಾನವರು ಉತ್ತಮವಾಗಿ ಜೀವಿಸಲು ಪೂರಕವಾದ ಸ್ಥಿತಿಗತಿಗಳನ್ನು ಒಳಗೊಂಡ ವಾತಾವರಣವೇ ಸ್ವಾತಂತ್ರ್ಯ. ರಾಜ್ಯವು ಹಕ್ಕುಗಳನ್ನು ನೀಡಿ ಇಂತಹ ವಾತಾವರಣವನ್ನು ಸೃಷ್ಟಿಸುತ್ತದೆ. ಹಾಗಾಗಿ ಸ್ವಾತಂತ್ರ್ಯವನ್ನು ಹಕ್ಕುಗಳಿಂದ ಬೇರ್ಪಡಿಸಲು ಸಾಧ್ಯವಿಲ್ಲ. ಒಟ್ಟಿನಲ್ಲಿ ಪ್ರತಿಯೊಬ್ಬ ವ್ಯಕ್ತಿಯು ತನ್ನ ಸರ್ವತೋಮುಖ ವ್ಯಕ್ತಿತ್ವದ ವಿಕಾಸಕ್ಕಾಗಿ, ಇತರರ ಹಕ್ಕುಗಳಿಗೆ ಚ್ಯುತಿ ಉಂಟಾಗದಂತೆ ತನ್ನ ಹಕ್ಕುಗಳನ್ನು ಅನುಭವಿಸುವುದೇ ಸ್ವಾತಂತ್ರ್ಯ

## 5.2 ಸ್ವಾತಂತ್ರ್ಯದ ಮಹತ್ವ:

1. ಸ್ವಾತಂತ್ರ್ಯವು ವ್ಯಕ್ತಿಯ ವ್ಯಕ್ತಿತ್ವದ ವಿಕಸನಕ್ಕೆ ಅಗತ್ಯವಾಗಿರುತ್ತದೆ. ಮೀನಿಗೆ ನೀರಿನ ಅವಶ್ಯಕತೆ ಇರುವಂತೆ, ಮನುಷ್ಯನಿಗೆ ಸ್ವಾತಂತ್ರ್ಯದ ಅವಶ್ಯಕತೆ ಇದೆ.
2. ವ್ಯಕ್ತಿಯು ಉತ್ತಮ ನಾಗರಿಕನಾಗಿ ಜೀವನ ನಿರ್ವಹಿಸಲು ಸ್ವಾತಂತ್ರ್ಯ ಅಗತ್ಯವಾಗಿದೆ.
3. ಸ್ವಾತಂತ್ರ್ಯವು ಪ್ರತಿಯೊಬ್ಬ ವ್ಯಕ್ತಿಯ ಜೀವನಮಟ್ಟವನ್ನು ಉತ್ತಮಪಡಿಸಲು ಮತ್ತು ಜೀವನಾವಶ್ಯಕತೆಗಳನ್ನು ಪೂರೈಸಿಕೊಳ್ಳಲು ಅವಶ್ಯಕವಾಗಿದೆ.
4. ಪ್ರತಿಯೊಬ್ಬ ವ್ಯಕ್ತಿ ತನ್ನ ವಿಚಾರವನ್ನು ಅಭಿವ್ಯಕ್ತಗೊಳಿಸಲು ಸ್ವಾತಂತ್ರ್ಯವು ಅಗತ್ಯವಾಗಿದೆ.
5. ರಾಜಕೀಯ ಸ್ವಾತಂತ್ರ್ಯವನ್ನು ನೀಡುವ ರಾಜಕೀಯ ಹಕ್ಕುಗಳು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ವಿಶೇಷ ಸ್ಥಾನ ಪಡೆದಿವೆ. ಪ್ರಜೆಗಳು ತಮ್ಮನ್ನು ಯಾರು ಆಡಳಿತ ನಡೆಸಬೇಕೆಂಬ ನಿರ್ಧಾರವನ್ನು ತೆಗೆದುಕೊಳ್ಳಲು ಸ್ವಾತಂತ್ರ್ಯ ನೆರವಾಗುತ್ತದೆ.

ಸ್ವಾತಂತ್ರ್ಯ, ಸಮಾನತೆ ಮತ್ತು ನ್ಯಾಯ ಪ್ರಜಾಪ್ರಭುತ್ವದ ಆಧಾರಸ್ತಂಭಗಳಾಗಿವೆ. ಸ್ವಾತಂತ್ರ್ಯಕ್ಕೋಸ್ಕರ ನಡೆದ ಅಮೆರಿಕಾ, ಫ್ರಾನ್ಸ್, ರಷ್ಯಾದ ಕ್ರಾಂತಿಗಳು ಹಾಗೂ ಭಾರತದ ಸ್ವಾತಂತ್ರ್ಯಕ್ಕಾಗಿ ನಡೆದ ಹೋರಾಟಗಳು ಸ್ವಾತಂತ್ರ್ಯದ ಮಹತ್ವವನ್ನು ತಿಳಿಸುತ್ತವೆ.

## 5.3 ಸ್ವಾತಂತ್ರ್ಯದ ವಿಧಗಳು:

ಸ್ವಾತಂತ್ರ್ಯದ ನಿಜವಾದ ಅರ್ಥ ಮತ್ತು ಮಹತ್ವವನ್ನು ಅರಿತುಕೊಳ್ಳಬೇಕಾದರೆ ಸ್ವಾತಂತ್ರ್ಯದ ವಿಧಗಳನ್ನು ಅರ್ಥೈಸಿಕೊಳ್ಳುವುದು ಅಗತ್ಯ.

**ಸ್ವಾತಂತ್ರ**

- **ನೈಸರ್ಗಿಕ ಸ್ವಾತಂತ್ರ್ಯ**
- **ನೈತಿಕ ಸ್ವಾತಂತ್ರ್ಯ**
- **ನಾಗರಿಕ ಸ್ವಾತಂತ್ರ್ಯ**
  a. ವೈಯಕ್ತಿಕ ಸ್ವಾತಂತ್ರ್ಯ ರಾಜಕೀಯ ಸ್ವಾತಂತ್ರ್ಯ ಆರ್ಥಿಕ ಸ್ವಾತಂತ್ರ್ಯ
  b. ಗೃಹ ಸ್ವಾತಂತ್ರ್ಯ ರಾಷ್ಟ್ರೀಯ ಸ್ವಾತಂತ್ರ್ಯ ಅಂತರರಾಷ್ಟ್ರೀಯ ಸ್ವಾತಂತ್ರ್ಯ

### *1) ನೈಸರ್ಗಿಕ ಸ್ವಾತಂತ್ರ್ಯ: (Natural Liberty)*

ಯಾವ ನಿರ್ಬಂಧಗಳಿಲ್ಲದೇ ವ್ಯಕ್ತಿ ತನಗಿಷ್ಟ ಬಂದಂತೆ ವರ್ತಿಸುವುದೇ ನೈಸರ್ಗಿಕ ಸ್ವಾತಂತ್ರ್ಯವಾಗಿದೆ. ಇದು ಪ್ರಕೃತಿದತ್ತ ಸ್ವಾತಂತ್ರ್ಯವಾಗಿದೆ. ಸಮಾಜ ಮತ್ತು ರಾಜ್ಯಗಳ ಸ್ಥಾಪನೆಯಾಗುವ ಮೊದಲು ಪ್ರಾಣಿಗಳಂತೆಯೇ ಮಾನವ ನಿಸರ್ಗದತ್ತ ಸ್ವಾತಂತ್ರ್ಯ ಅನುಭವಿಸುತ್ತಿದ್ದ. ಸಮಾಜ ಸ್ಥಾಪನೆಯ ನಂತರ ಇಂತಹ ಸ್ವಾತಂತ್ರ್ಯ ಕೊನೆಗೊಂಡಿತು. ಮಾನವ ಸಮಾಜಜೀವಿಯಾಗಿ ರಾಜ್ಯದಲ್ಲಿ ವಾಸಮಾಡುವಾಗ ಇಂತಹ ಸ್ವಾತಂತ್ರ್ಯವನ್ನು ಅನುಭವಿಸಲು ಸಾಧ್ಯವಿಲ್ಲ. ರಾಜ್ಯವು ಅನಿರ್ಬಂಧಿತ ಸ್ವಾತಂತ್ರ್ಯಕ್ಕೆ ನಿರ್ಬಂಧನೆಗಳನ್ನು ವಿಧಿಸಿ ಸ್ವೇಚ್ಛಾಚಾರವನ್ನು ತಡೆಗಟ್ಟಿತು. ರೂಸೋರವರ ಪ್ರಕಾರ ಮಾನವನು ಸ್ವತಂತ್ರವಾಗಿ ಹುಟ್ಟಿದರೂ ಸಂಕೋಲೆಯಲ್ಲಿ ಬಂಧಿತನಾಗಿದ್ದಾನೆ. ಅಂದರೆ ರಾಜ್ಯದ ಸ್ಥಾಪನೆಯ ನಂತರ ಮಾನವನ ವರ್ತನೆಯ ಮೇಲೆ ನಿಯಂತ್ರಣವನ್ನು ತರಲಾಯಿತು.

### 2) *ನೈತಿಕ ಸ್ವಾತಂತ್ರ್ಯ: (Moral Liberty)*

ಪ್ರತಿಯೊಬ್ಬ ವ್ಯಕ್ತಿ ಸಾಮಾಜಿಕವಾಗಿ ಸ್ವೀಕೃತವಾದ ಮೌಲ್ಯಯುತ ರೀತಿ ನೀತಿಗಳಿಂದ ವ್ಯವಹರಿಸುವುದೇ ನೈತಿಕ ಸ್ವಾತಂತ್ರ್ಯ. ಇದು ವ್ಯಕ್ತಿ ತನ್ನ ವ್ಯಕ್ತಿತ್ವದ ವಿಕಾಸಕ್ಕಾಗಿ ವಿವೇಚನಾಯುಕ್ತವಾಗಿ ವರ್ತಿಸುವ ಸಾಮರ್ಥ್ಯವನ್ನು ಪ್ರತಿಬಿಂಬಿಸುತ್ತದೆ. ಸ್ನೇಹ, ಪ್ರೀತಿ, ವಾತ್ಸಲ್ಯ, ಮಮತೆ, ಕರುಣೆ, ಸಹನುಭೂತಿ ಮತ್ತು ಮಾನವೀಯತೆಯಿಂದ ವ್ಯವಹರಿಸುವ ಸ್ವಾತಂತ್ರ್ಯವೇ ಎಲ್ಲಾ ವಿಧದ ಸ್ವಾತಂತ್ರ್ಯಗಳಿಗೆ ತಳಹದಿಯಾಗಿದೆ.

### 3) *ನಾಗರಿಕ ಸ್ವಾತಂತ್ರ್ಯ: (Civil Liberty)*

ನಾಗರಿಕ ಸ್ವಾತಂತ್ರ್ಯವು ನೈಸರ್ಗಿಕ ಸ್ವಾತಂತ್ರ್ಯಕ್ಕೆ ವಿರುದ್ಧವಾಗಿ ಸಮಾಜ ಮತ್ತು ರಾಜ್ಯ ಸ್ಥಾಪನೆಯಿಂದ ವ್ಯಕ್ತಿ ಅನುಭವಿಸುವ ಸ್ವಾತಂತ್ರ್ಯವಾಗಿದೆ. ರಾಜ್ಯವು ತನ್ನ ಪ್ರಜೆಗಳ ಅನುಕೂಲಕ್ಕಾಗಿ ರಚಿಸಿ ಜಾರಿಗೆ ತಂದ ಹಕ್ಕುಗಳ ಸಾರಸತ್ವವೇ ನಾಗರಿಕ ಸ್ವಾತಂತ್ರ್ಯವಾಗಿದೆ. ರಾಜ್ಯವು ತನ್ನ ಶಾಸನದ ಮೂಲಕ ನಾಗರಿಕ ಸ್ವಾತಂತ್ರ್ಯವನ್ನು ರಕ್ಷಿಸುತ್ತದೆ.

ನಾಗರಿಕ ಸ್ವಾತಂತ್ರ್ಯದ ವಿಧಗಳು

#### a. ವೈಯಕ್ತಿಕ ಸ್ವಾತಂತ್ರ್ಯ: (Individual Liberty)

ಇದು ಮುಖ್ಯವಾಗಿ ಮಾನವನ ವೈಯಕ್ತಿಕ ವಿಷಯಕ್ಕೆ ಸಂಬಂಧಿಸಿದೆ. ಮಾನವನು ತನ್ನ ವೈಯಕ್ತಿಕ ಜೀವನಕ್ಕಾಗಿ ಸಂಬಂಧಗಳನ್ನು ಬೆಳಸಿಕೊಳ್ಳಲು ಹೊಂದಿರುವ ಅವಕಾಶವೇ ವೈಯುಕ್ತಿಕ ಸ್ವಾತಂತ್ರ್ಯ. ವೈಯಕ್ತಿಕ ಸ್ವಾತಂತ್ರ್ಯವು ಮೂರು ಆಯಾಮಗಳನ್ನು ಹೊಂದಿದೆ. ಅವುಗಳೆಂದರೆ:

1. ವೈಯಕ್ತಿಕ ಭದ್ರತೆ
2. ಹೋರಾಟ ಸ್ವಾತಂತ್ರ್ಯ

3. ವೈಯಕ್ತಿಕ ಸ್ವತ್ತು.

### b. ರಾಜಕೀಯ ಸ್ವಾತಂತ್ರ್ಯ: (Political Liberty)

ರಾಜಕೀಯ ಸ್ವಾತಂತ್ರ್ಯವು ಪ್ರಜಾಪ್ರಭುತ್ವದ ಆಧಾರಸ್ತಂಭವಾಗಿದೆ. ಪೌರತ್ವದ ಆಧಾರದ ಮೇರೆಗೆ ವ್ಯಕ್ತಿಗೆ ರಾಜಕೀಯ ಸ್ವಾತಂತ್ರ್ಯಗಳನ್ನು ನೀಡಲಾಗಿದೆ. ರಾಜಕೀಯ ಸ್ವಾತಂತ್ರ್ಯವು ವ್ಯಕ್ತಿಗೆ ರಾಜ್ಯದ ರಾಜಕೀಯ ಹಾಗೂ ಆಡಳಿತದಲ್ಲಿ ಭಾಗವಹಿಸಲು ಅವಕಾಶ ನೀಡಿದೆ. ರಾಜ್ಯಾಡಳಿತದಲ್ಲಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಪಾಲ್ಗೊಳ್ಳಲು ನಾಗರಿಕರಿಗೆ ಇರುವ ಅಧಿಕಾರವೇ "ರಾಜಕೀಯ ಸ್ವಾತಂತ್ರ್ಯ". ಉದಾಹರಣೆಗೆ: ಮತದಾನದ ಹಕ್ಕು, ಚುನಾವಣೆಯಲ್ಲಿ ಸ್ಪರ್ಧಿಸುವ ಹಕ್ಕು, ಸಾರ್ವಜನಿಕ ಹುದ್ದೆಯನ್ನು ಹೊಂದುವ ಹಕ್ಕು, ಸಾರ್ವಜನಿಕ ನೀತಿಗಳನ್ನು ಟೀಕಿಸುವ ಹಕ್ಕು ಮತ್ತು ಸರ್ಕಾರಕ್ಕೆ ಮನವಿ ಸಲ್ಲಿಸುವ ಹಕ್ಕು ಮುಂತಾದ ರಾಜಕೀಯ ಹಕ್ಕುಗಳು ನಾಗರಿಕರಿಗೆ ರಾಜಕೀಯ ಸ್ವಾತಂತ್ರ್ಯವನ್ನು ತಂದುಕೊಡುತ್ತವೆ.

**1. ಆರ್ಥಿಕ ಸ್ವಾತಂತ್ರ್ಯ: (Economical Liberty)**

ನಾಗರಿಕರ ಬದುಕಿಗೆ ಆರ್ಥಿಕ ಭದ್ರತೆಯನ್ನು ದೊರಕಿಸಿಕೊಳ್ಳುವುದು ಆರ್ಥಿಕ ಸ್ವಾತಂತ್ರ್ಯವಾಗಿದೆ. ಮಾನವನ ಮೂಲಭೂತ ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳುವ ಸ್ವಾತಂತ್ರ್ಯ ಇದಾಗಿದೆ. ಆರ್ಥಿಕ ಸ್ವಾತಂತ್ರ್ಯವು ರಾಜಕೀಯ ಸ್ವಾತಂತ್ರ್ಯಕ್ಕಿಂತಲೂ ಮುಖ್ಯ. ಆರ್ಥಿಕ ಭದ್ರತೆಯಿದ್ದಾಗ ವ್ಯಕ್ತಿಯು ತನ್ನ ವ್ಯಕ್ತಿತ್ವದ ಸರ್ವಾಂಗೀಣ ಅಭಿವೃದ್ಧಿಯನ್ನು ಸಾಧಿಸಿಕೊಳ್ಳುತ್ತಾನೆ. ದೇಶದ ಸ್ಥಿರ ಮತ್ತು ಸಶಕ್ತ ಸರ್ಕಾರಕ್ಕೆ ಜನರ ಆರ್ಥಿಕ ಸ್ವಾತಂತ್ರ್ಯ ಬುನಾದಿಯಾಗಿರುತ್ತದೆ.

**2. ಗೃಹ ಸ್ವಾತಂತ್ರ್ಯ: (Domestic Liberty)**

ಹಾಬ್ ಹೌಸ್‌ರ ಪ್ರಕಾರ: "ಕುಟುಂಬದೊಳಗಿನ ಹೆಂಡತಿ ಮತ್ತು ಮಕ್ಕಳಿಗೆ ಜವಾಬ್ದಾರಿಯುತ ಮತ್ತು ಗೌರವಯುತ ಸ್ಥಾನಮಾನವನ್ನು ನೀಡುವುದಾಗಿದೆ. ಕುಟುಂಬದ ಸದಸ್ಯರುಗಳೆಲ್ಲಾ ತಮ್ಮ ಇಚ್ಛೆಗಳಿಗನುಗುಣವಾಗಿ ವಿವಾಹವಾಗಲು, ನಿರ್ಣಯಗಳನ್ನು ಕೈಗೊಳ್ಳುವ ಹಾಗೂ ಪಾಲಕರು ಕುಟುಂಬದ ಸದಸ್ಯರೆಲ್ಲರ ಮಾನಸಿಕ ಮತ್ತು ನೈತಿಕ ವಿಕಾಸವನ್ನು ಸಾಧಿಸುವಂತೆ ನೋಡಿಕೊಳ್ಳುವ ಸ್ವಾತಂತ್ರ್ಯವೇ ಗೃಹ ಸ್ವಾತಂತ್ರ್ಯವಾಗಿರುತ್ತದೆ".

**3. ರಾಷ್ಟ್ರೀಯ ಸ್ವಾತಂತ್ರ್ಯ: (National Liberty)**

ಒಂದು ರಾಷ್ಟ್ರವು ಆಂತರಿಕವಾಗಿ ಆಡಳಿತವನ್ನು ನಿರ್ವಹಿಸುವ ಮತ್ತು ಬಾಹ್ಯವಾಗಿ ಅನ್ಯರಾಷ್ಟ್ರಗಳೊಂದಿಗೆ ಉತ್ತಮ ಸಂಬಂಧವನ್ನು ಹೊಂದುವ ಸ್ವಾತಂತ್ರ್ಯವೇ ರಾಷ್ಟ್ರೀಯ ಸ್ವಾತಂತ್ರ್ಯ. ಇದು ಒಂದು ದೇಶದ ರಾಜಕೀಯ ಸ್ವಾತಂತ್ರ್ಯ ಮತ್ತು ಪರಮಾಧಿಕಾರವನ್ನು ಪ್ರತಿಬಿಂಬಿಸುತ್ತದೆ. ರಾಷ್ಟ್ರವು ಸ್ವತಂತ್ರವಾಗಿದ್ದಾಗ ಮಾತ್ರ ಪ್ರಜೆಗಳು ಇತರ ಎಲ್ಲಾ ಸ್ವಾತಂತ್ರ್ಯಗಳನ್ನು ಅನುಭವಿಸಲು ಸಾಧ್ಯ. ಉದಾಹರಣೆಗೆ: 1947 ಆಗಸ್ಟ್ 15 ರ ಪೂರ್ವದಲ್ಲಿ ಭಾರತಕ್ಕೆ ರಾಷ್ಟ್ರೀಯ ಸ್ವಾತಂತ್ರ್ಯ ಇರಲಿಲ್ಲ.

### 4. ಅಂತರರಾಷ್ಟ್ರೀಯ ಸ್ವಾತಂತ್ರ್ಯ: (International Liberty)

ಒಂದು ರಾಷ್ಟ್ರವು ಅನ್ಯರಾಷ್ಟ್ರಗಳಿಗೆ ಸಂಬಂಧಿಸಿದಂತೆ ವಿದೇಶಾಂಗ ನೀತಿಯನ್ನು ಹೊಂದಿದ್ದು, ಶಾಂತಿ ಸಂಧಾನಗಳ ಮೂಲಕ ತಮ್ಮಲ್ಲಿರುವ ಭಿನ್ನಾಭಿಪ್ರಾಯಗಳನ್ನು ಬಗೆಹರಿಸಿಕೊಳ್ಳುವ ಸ್ವಾತಂತ್ರ್ಯವೇ ಅಂತರರಾಷ್ಟ್ರೀಯ ಸ್ವಾತಂತ್ರ್ಯ. ಇದರ ವ್ಯಾಪ್ತಿಯು ವಿಶಾಲವಾಗಿದೆ. ಇದು ಪ್ರಪಂಚದಲ್ಲಿರುವ ರಾಷ್ಟ್ರಗಳಿಗೆ ಯುದ್ಧ ತ್ಯಜಿಸುವಂತೆ, ಶಸ್ತ್ರಾಸ್ತ್ರಗಳ ಪ್ರಯೋಗದ ಬದಲಾಗಿ ನಿಶ್ಶಸ್ತ್ರೀಕರಣವನ್ನು ಪ್ರೋತ್ಸಾಹಿಸುತ್ತದೆ. ವಿಶ್ವದ ಎಲ್ಲ ದೇಶಗಳು ತಮ್ಮ ತಮ್ಮ ಸ್ವಾತಂತ್ರ್ಯವನ್ನು ಇತರ ದೇಶಗಳ ಸ್ವಾತಂತ್ರ್ಯಕ್ಕೆ ಧಕ್ಕೆಯುಂಟಾಗದಂತೆ ಬಳಸಬೇಕು. ಇದು ವಿಶ್ವದ ಶಾಂತಿ, ಸ್ಥಿರತೆ ಮತ್ತು ಪ್ರಗತಿಗೆ ಅಗತ್ಯವಾಗಿರುತ್ತದೆ. ಸಮಕಾಲೀನ ವಿಶ್ವದಲ್ಲಿ ಅಂತರರಾಷ್ಟ್ರೀಯ ಸ್ವಾತಂತ್ರ್ಯದ ರಕ್ಷಣೆಗಾಗಿ ವಿಶ್ವಸಂಸ್ಥೆಯಂತಹ ಜಾಗತಿಕ ಸಂಘ-ಸಂಸ್ಥೆಗಳು ಶ್ರಮಿಸುತ್ತಿವೆ.

ಇದು ರಾಜ್ಯಶಾಸ್ತ್ರದ ಮೂಲ ಪರಿಕಲ್ಪನೆಗಳಲ್ಲಿ ಒಂದಾದ "ಸ್ವಾತಂತ್ರ್ಯವು ಸರ್ವರ ಸರ್ವಾಂಗೀಣ ಅಭಿವೃದ್ಧಿಗೆ ಪೂರಕವು, ಪ್ರೇರಕವು ಆಗಿದೆ." ಪ್ರಜೆಗಳು ವಿವಿಧ ರೀತಿಯ ಸ್ವಾತಂತ್ರ್ಯಗಳನ್ನು ಅನುಭವಿಸುತ್ತಾರೆ ಹಾಗೂ ಇವುಗಳಿಂದ ಶಾಂತಿಯುತ ಮತ್ತು ಗೌರವಯುತ ಜೀವನ ನಡೆಸಲು ಸಾಧ್ಯವಾಗುತ್ತದೆ. ಈ ಸ್ವಾತಂತ್ರ್ಯವು ಪ್ರತಿಯೊಬ್ಬರಿಗೂ ಸಮಾನ ಅವಕಾಶಗಳನ್ನು ನೀಡಿ ಸರ್ವರ ಪ್ರಗತಿಗೆ ಪ್ರೇರಕವಾಗಿದೆ.

## ಅಭ್ಯಾಸ

### I. ಒಂದು ವಾಕ್ಯದಲ್ಲಿ ಉತ್ತರಿಸಿ:

1. ಸ್ವಾತಂತ್ರ್ಯದ ಮೂಲ ಪದ ಯಾವುದು?
2. ಸ್ವಾತಂತ್ರ್ಯದ ಅರ್ಥವನ್ನು ತಿಳಿಸಿ.
3. ನೈಸರ್ಗಿಕ ಸ್ವಾತಂತ್ರ್ಯ ಎಂದರೇನು?
4. ನಾಗರಿಕ ಸ್ವಾತಂತ್ರ್ಯ ಎಂದರೇನು?
5. ರಾಷ್ಟ್ರೀಯ ಸ್ವಾತಂತ್ರ್ಯ ಎಂದರೇನು?

**II.** ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ:

1. ವೈಯಕ್ತಿಕ ಸ್ವಾತಂತ್ರ್ಯ ಎಂದರೇನು? ಅದರ ಮೂರು ಆಯಾಮಗಳನ್ನು ತಿಳಿಸಿ.
2. ನೈಸರ್ಗಿಕ ಸ್ವಾತಂತ್ರ್ಯ ಅಸ್ತಿತ್ವದಲ್ಲಿರಲು ಸಾಧ್ಯವಿಲ್ಲ, ಏಕೆ?
3. ರಾಜಕೀಯ ಸ್ವಾತಂತ್ರ್ಯ ಎಂದರೇನು?
4. ನೈತಿಕ ಸ್ವಾತಂತ್ರ್ಯ ಎಂದರೇನು?

3. ಎಂಟು ಅಥವಾ ಹತ್ತು ವಾಕ್ಯಗಳಲ್ಲಿ ಉತ್ತರಿಸಿ:

1. ಸ್ವಾತಂತ್ರ್ಯದ ಮಹತ್ವವನ್ನು ವಿವರಿಸಿ.

2. ಸ್ವಾತಂತ್ರ್ಯದ ವಿಧಗಳನ್ನು ಪಟ್ಟಿಮಾಡಿ.

ಸಲಹಾತ್ಮಕ ಚಟುವಟಿಕೆಗಳು:

1. ಸ್ವಾತಂತ್ರ್ಯದ ಪರಿಕಲ್ಪನೆ ಅನೇಕ ಕ್ರಾಂತಿಗಳಿಗೆ ಹೇಗೆ ಪ್ರೇರಕವಾಯಿತು ಚರ್ಚಿಸಿ.
2. ನಿಮ್ಮ ವೈಯಕ್ತಿಕ ಜೀವನದಲ್ಲಿ ಸ್ವಾತಂತ್ರ್ಯದಿಂದ ಆಗುತ್ತಿರುವ ಲಾಭ ನಷ್ಟಗಳನ್ನು ಚರ್ಚಿಸಿ.

## ಅಧ್ಯಾಯ- 6 ಸಮಾನತೆ (Equality)

**ಕಲಿಕಾ ಉದ್ದೇಶಗಳು:**

1. ಸಮಾನತೆಯ ಅರ್ಥವನ್ನು ತಿಳಿಯುವುದು.
2. ಸಮಾನತೆಯ ಹಿನ್ನೆಲೆಯನ್ನು ಅರಿಯುವುದು.
3. ಸಮಾನತೆಯ ಪ್ರಾಮುಖ್ಯತೆಯನ್ನು ಮನಗಾಣುವುದು.
4. ಸಮಾನತೆಯ ವಿಧಗಳನ್ನು ಗುರುತಿಸುವುದು.

"ಮಾನವರೆಲ್ಲರೂ ಸಮಾನತೆಯನ್ನು ಹೊಂದಿಯೇ ಹುಟ್ಟುತ್ತಾರೆ" ಅಮೆರಿಕಾದ ಸ್ವಾತಂತ್ರ್ಯ ಘೋಷಣೆ.

"ಮಾನವರು ಸ್ವತಂತ್ರವಾಗಿ ಹುಟ್ಟುತ್ತಾರೆ ಮತ್ತು ಸ್ವತಂತ್ರವಾಗಿಯೇ ಮುಂದುವರಿಯುತ್ತಾರೆ." ಫ್ರಾನ್ಸ್‌ನ ರಾಷ್ಟ್ರೀಯ ಸಭೆಯ ಘೋಷಣೆ

### ಪೀಠಿಕೆ:

ನಿಸರ್ಗದ ಮಡಿಲಲ್ಲಿ ಹುಟ್ಟಿದ ಪ್ರತಿಯೊಂದು ಜೀವಿಯೂ ಸ್ವತಂತ್ರವಾಗಿ ಮತ್ತು ಸ್ವಚ್ಛಂದವಾಗಿ ಬಾಳಲು ಇಚ್ಛಿಸುತ್ತದೆ. ಭೇದ ಭಾವಗಳ ಬಂಧನದಿಂದ ಮುಕ್ತವಾಗಿರಲು ಬಯಸುತ್ತವೆ. ಜೀವಸಂಕುಲದಲ್ಲಿಯೇ ಸರ್ವಶ್ರೇಷ್ಠನೆನಿಸಿದ ಮಾನವನು ಸಹ ಇದಕ್ಕೆ ಹೊರತಾಗಿಲ್ಲ, ನಿಸರ್ಗದ ದೃಷ್ಟಿಯಲ್ಲಿ ಎಲ್ಲರೂ ಸಮಾನರಾಗಿದ್ದಾರೆ. ಸೂರ್ಯನ ಬೆಳಕು, ಬೀಸುವ ಗಾಳಿ, ಹರಿಯುವ ನೀರು, ಇರುವ ಭೂಮಿ, ಅಗ್ನಿ, ಆಕಾಶಗಳೆಲ್ಲವೂ ಭೇದಭಾವವಿಲ್ಲದೆ ತಮ್ಮ ಫಲಗಳನ್ನು ನೀಡುತ್ತವೆ. ಆದರೆ ಇವುಗಳ ಭಾಗವಾಗಿ ಜನಿಸಿದ ಮಾನವ ಸ್ವಾರ್ಥ, ಲಾಭ, ಲೋಭ ಲಾಲಸೆಗಳಿಂದಾಗಿ ಅಸಮಾನತೆಯನ್ನು ಸೃಷ್ಟಿಸಿದ್ದಾನೆ. ಪ್ರಾಕೃತಿಕ ಅಸಮಾನತೆಗಳಿಗಿಂತಲೂ ಮಾನವ ನಿರ್ಮಿತ ಅಸಮಾನತೆಗಳು ಘನ ಘೋರವಾಗಿವೆ. ಇವುಗಳನ್ನು ನಿರ್ಮೂಲಗೊಳಿಸುವುದೇ ಸಮಾನತೆಯ ಪರಮೋದ್ದೇಶವಾಗಿದೆ. ಈ ಹಿನ್ನೆಲೆಯಲ್ಲಿ ಸಮಾನತೆಯ ಮೂಲಪರಿಕಲ್ಪನೆಯನ್ನು ಚರ್ಚಿಸಲಾಗಿದೆ.

ಮಾನವ ನಿರ್ಮಿತ ಅಸಮಾನತೆಯು ಶತಶತಮಾನಗಳಿಂದಲೂ ಅಸ್ತಿತ್ವದಲ್ಲಿದೆ. ಸಮಾನತೆ ಪರಿಕಲ್ಪನೆ ಕ್ರಿ. ಶ. 1776 ರ ಅಮೇರಿಕಾ ಸ್ವಾತಂತ್ರ್ಯ ಘೋಷಣೆಯಲ್ಲಿ ಮೊದಲ ಬಾರಿಗೆ ಅಧಿಕೃತವಾಗಿ ಬಳಕೆಗೆ ಬಂದಿತು. ಈ ಘೋಷಣೆಯು "ಮಾನವರೆಲ್ಲರೂ ಸಮಾನತೆಯನ್ನು ಹೊಂದಿಯೇ ಹುಟ್ಟುತ್ತಾರೆ" ಎಂದು ಘೋಷಿಸಿತು. 1789 ರ ಫ್ರಾನ್ ಮಹಾಕ್ರಾಂತಿಯು "ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವ" ಎಂಬ ಮುಖ್ಯ ತತ್ವಗಳಿಗೆ ಪ್ರಾಮುಖ್ಯತೆಯನ್ನು ನೀಡಿತು. 1789 ರ ಫ್ರಾನ್ಸಿನ ರಾಷ್ಟ್ರೀಯ ಸಭೆಯು ಪ್ರಕಟಿಸಿದ ಮಾನವನ ಹಕ್ಕುಗಳ ಘೋಷಣೆ ಪ್ರಕಾರ "ಮಾನವರು ಸ್ವತಂತ್ರವಾಗಿ ಹುಟ್ಟುತ್ತಾರೆ. ಸ್ವತಂತ್ರವಾಗಿಯೇ ಮುಂದುವರಿಯುತ್ತಾರೆ"

ಎಂದು ಘೋಷಿಸಿತು. ಇದು ಸಮಾನತೆಗೆ ಸ್ವಾತಂತ್ರ್ಯದ ಅಗತ್ಯತೆಯನ್ನು ಮನವರಿಕೆ ಮಾಡಿಕೊಟ್ಟಿತು.

## 6.1 ಸಮಾನತೆಯ ಅರ್ಥ:

ಸಮಾನತೆ ಪರಿಕಲ್ಪನೆಯನ್ನು ನಕಾರಾತ್ಮಕ ಮತ್ತು ಸಕಾರಾತ್ಮಕ ದೃಷ್ಟಿಕೋನಗಳಿಂದ ಅರ್ಥೈಸಲಾಗಿದೆ.

1) ಸಮಾನತೆಯ ನಕಾರಾತ್ಮಕ ಅರ್ಥ:

ಎಲ್ಲಾ ಬಗೆಯ ವಿಶೇಷ ಸೌಲಭ್ಯಗಳನ್ನು ನಿಷೇಧಿಸುವುದೇ ನಕಾರಾತ್ಮಕ ಸಮಾನತೆಯಾಗಿದೆ. ಧರ್ಮ, ವರ್ಣ, ಲಿಂಗ, ಅಂತಸ್ತುಗಳ ಆಧಾರದ ಮೇಲೆ ವಿಶೇಷ ಸೌಲಭ್ಯಗಳನ್ನು ನೀಡಬಾರದು ಎಂದರ್ಥ.

2) ಸಮಾನತೆಯ ಸಕಾರಾತ್ಮಕ ಅರ್ಥ:

ಸಮಾಜದಲ್ಲಿ ಸರ್ವರು ತಮ್ಮ ಬುದ್ಧಿವಂತಿಕೆ ಮತ್ತು ಸಾಮರ್ಥ್ಯಗಳ ಸಂಪೂರ್ಣ ಬೆಳವಣಿಗೆಗೆ ಅಗತ್ಯವಾದ ಅವಕಾಶಗಳನ್ನು ನೀಡುವುದೇ ಸಕಾರಾತ್ಮಕ ಸಮಾನತೆ. ಪ್ರತಿಯೊಬ್ಬರ ಅವಶ್ಯಕತೆ, ಅರ್ಹತೆ, ಯೋಗ್ಯತೆ ಮತ್ತು ಪ್ರಯತ್ನದಲ್ಲಿ ಭಿನ್ನತೆಯನ್ನು ಹೊಂದಿರುತ್ತಾರೆ. ಉದಾಹರಣೆಗೆ ಒಬ್ಬ ಅಭಿಯಂತರನಿಗೂ ಮತ್ತು ಮನೆ ಕಟ್ಟುವ ಕಾರ್ಮಿಕನಿಗೂ ಸಮಾನ ವೇತನ ಮತ್ತು ಸೌಲಭ್ಯಗಳನ್ನು ಕೊಡಲಾಗುವುದಿಲ್ಲ.

ವ್ಯಾಖ್ಯೆಗಳು:

**1) ವೆಬ್‌ಸ್ಟರ್ ಶಬ್ದಕೋಶದ ಪ್ರಕಾರ:** "ಒಬ್ಬ ವ್ಯಕ್ತಿಯು ತಾನು ಅನುಭವಿಸುವ ಸ್ವಾತಂತ್ರ್ಯ ಕಾನೂನು, ಸೌಲಭ್ಯ, ಅಧಿಕಾರ ಮುಂತಾದವುಗಳು ಮತ್ತೊಬ್ಬ ವ್ಯಕ್ತಿಗೂ ಅನುಭವಿಸಲು ಸಮಾನವಾಗಿ ದೊರೆಯುವ ಅವಕಾಶವೇ ಸಮಾನತೆ".

**2) ಹೆಚ್. ಜೆ. ಲಾಸ್ಕಿರವರ ಪ್ರಕಾರ:** "ಸಮಾನತೆ ಎಂದರೆ ವಿಶೇಷ ಸೌಲಭ್ಯಗಳು ಇಲ್ಲದಿರುವುದು ಮತ್ತು ಸಾಕಷ್ಟು ಅವಕಾಶಗಳನ್ನು ಎಲ್ಲರಿಗೂ ನೀಡುವುದೇ ಸಮಾನತೆ."

**3) ಅರ್ನೆಸ್ಟ್ ಬಾರ್ಕರ್‌ರವರ ಪ್ರಕಾರ:** "ನನಗೆ ಹಕ್ಕುಗಳ ರೂಪದಲ್ಲಿ ದೊರೆತಿರುವ ಸೌಲಭ್ಯಗಳು ಇತರರಿಗೂದೊರೆಯಬೇಕು ಮತ್ತು ಇತರರಿಗೆ ನೀಡಲಾದ ಹಕ್ಕುಗಳನ್ನು ನನಗೂ ನೀಡುವುದೇ ಸಮಾನತೆ".

**4) ಗಿಲ್ ಕ್ರಿಸ್ಟ್‌ರವರ ಪ್ರಕಾರ:** "ಎಲ್ಲರಿಗೂ ಒಂದೇ ರೀತಿಯಾದ ಹಕ್ಕುಗಳನ್ನು ನೀಡುವುದೇ ಸಮಾನತೆ"

ಒಟ್ಟಿನಲ್ಲಿ ಮಾನವ ನಿರ್ಮಿತ ಅಸಮಾನತೆಯನ್ನು ನಿರ್ಮೂಲನೆಗೊಳಿಸಿ, ಪ್ರತಿಯೊಬ್ಬ ವ್ಯಕ್ತಿಗೂ ತನ್ನ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಲು ಸಮಾನ ಅವಕಾಶಗಳನ್ನು ನೀಡುವುದೇ ಸಮಾನತೆ.

## 6.2 ಸಮಾನತೆಯ ಪ್ರಾಮುಖ್ಯತೆ (Importance of Equality)

ಸ್ವಾತಂತ್ರ್ಯದಂತೆ ಸಮಾನತೆಯೂ ಕೂಡ ಸಾರ್ವತ್ರಿಕ ತತ್ವವಾಗಿದೆ. ಅದು ಕಾಲಕಾಲಕ್ಕೆ ಬದಲಾವಣೆಯಾಗುತ್ತಾ ಬಂದಿದೆ. ರಾಜ್ಯಶಾಸ್ತ್ರದಲ್ಲಿನ ಸಮಾನತೆಯು ನೈಸರ್ಗಿಕ ಕೊಡುಗೆಗಳಿಗೆ ಅನ್ವಯಿಸುವುದಿಲ್ಲ. ಬದಲಾಗಿ ಸಮಾನತೆಯು ಮಾನವನಿಂದ ನಿರ್ಮಿತವಾದ ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ ಕ್ಷೇತ್ರಗಳ ಅಸಮಾನತೆಗಳನ್ನು ನಿರ್ಮೂಲನೆಗೊಳಿಸುವುದಕ್ಕೆ ಸಂಬಂಧಿಸಿದೆ.

*ಸಮಾನತೆಯ ಪ್ರಾಮುಖ್ಯತೆಯನ್ನು ಈ ಕೆಳಕಂಡ ಅಂಶಗಳಿಂದ ತಿಳಿಯಬಹುದು:*

1) ಪ್ರಜಾಪ್ರಭುತ್ವದ ಮೂಲ ಉದ್ದೇಶಗಳಿಗೆ ಸ್ವಾತಂತ್ರ್ಯ ಮತ್ತು ಸಮಾನತೆಗಳು ಅಡಿಗಲ್ಲುಗಳಾಗಿವೆ. ಸಮಾನತೆಯಿಲ್ಲದೆ ಮಾನವನ ಬದುಕು ಅಸಹನೀಯವಾಗುತ್ತದೆ.

2) ಮಾನವನ ಬದುಕಿನಲ್ಲಿ ಸಮಾನತೆಯು ಅತ್ಯಂತ ಪ್ರಮುಖ ಪಾತ್ರವನ್ನು ವಹಿಸುತ್ತದೆ. ಸಮಾನತೆಯ ತತ್ವವು ಗುಲಾಮಗಿರಿಯನ್ನು, ಶೋಷಣೆ, ದಬ್ಬಾಳಿಕೆಯನ್ನು ನಿರ್ಮೂಲನೆ ಮಾಡುವಲ್ಲಿ ಸಹಾಯಕವಾಗಿವೆ. ಫ್ರಾನ್ಸ್, ರಷ್ಯ, ಭಾರತ ಮುಂತಾದ ರಾಷ್ಟ್ರಗಳಲ್ಲಿ ಸಂಭವಿಸಿದ ರಾಜಕೀಯ ಕ್ರಾಂತಿಗಳು ಸಮಾನತೆಗಾಗಿ ನಡೆದ ಹೋರಾಟಗಳಾಗಿವೆ.

3) ಸಮಾನತೆಯು ಸ್ವಾತಂತ್ರ್ಯಕ್ಕೆ ಪೂರಕವಾದುದು. ಸಮಾನತೆ ಇದ್ದಾಗ ಮಾತ್ರ ಜಾತಿ, ಧರ್ಮ, ಜನಾಂಗ, ಲಿಂಗಗಳ ಆಧಾರದ ಮೇಲೆ ತಾರತಮ್ಯವಿಲ್ಲದೆ ಎಲ್ಲರೂ ಸ್ವಾತಂತ್ರ್ಯವಾಗಿ ಬದುಕಲು ಸಾಧ್ಯವಾಗುತ್ತದೆ. ಹಾಗಾಗಿ ಪೊಲಾರ್ಡ್ ಮತ್ತು ಟಾನಿಯವರು "ಸಮಾನತೆ ಇದ್ದಲ್ಲಿ ಮಾತ್ರ ನಿಜವಾದ ಸ್ವಾತಂತ್ರ್ಯವಿರುತ್ತದೆ" ಎಂದಿದ್ದಾರೆ.

4) ಸಮಾನತೆಯು ವ್ಯಕ್ತಿಯ ವ್ಯಕ್ತಿತ್ವದ ಬೆಳವಣಿಗೆಗೆ ಅಗತ್ಯವಾಗಿದೆ. ಸಮಾನತೆಯು ವ್ಯಕ್ತಿಯ ವ್ಯಕ್ತಿತ್ವದ ವಿಕಾಸಕ್ಕೆ ಅಗತ್ಯವಾದ ಹಕ್ಕುಗಳು ಮತ್ತು ಸೌಲಭ್ಯಗಳನ್ನು ಪ್ರತಿಯೊಬ್ಬ ವ್ಯಕ್ತಿ ಪಡೆದುಕೊಳ್ಳುವ ಅವಕಾಶವನ್ನು ನೀಡುತ್ತದೆ.

5) ರಾಜಕೀಯ ಸಮಾನತೆ ಅತ್ಯಗತ್ಯವಾಗಿದೆ. ರಾಜಕೀಯ ಸಮಾನತೆಯು ಪ್ರಜಾಪ್ರಭುತ್ವಕ್ಕೆ ನೈಜವಾದ ಅರ್ಥವನ್ನು ನೀಡಿದೆ. ಇದರಿಂದ ನಿರಂಕುಶ ಆಡಳಿತ ಕೊನೆಗೊಂಡು ಒಂದು ಸಮತಾ ಸಮಾಜವನ್ನು ರೂಪಿಸಲು ಸಾಧ್ಯವಾಗುತ್ತದೆ.

6) ಸಮಾನತೆಯು ಸಾಮಾಜಿಕ ನ್ಯಾಯ ತತ್ವವನ್ನು ಪಡೆದುಕೊಳ್ಳಲು ಸಹಾಯಕವಾಗಿದೆ. ಸಮಾನತೆ ಇಲ್ಲದೆ ನ್ಯಾಯವನ್ನು ಅಪೇಕ್ಷಿಸಲು ಸಾಧ್ಯವಿಲ್ಲ. ಸಮಾನತೆಯೇ ಸಾಮಾಜಿಕ ನ್ಯಾಯದ ತಾಯಿ. ಸಮಾನತೆಯು ಸಮಾಜದ ಸರ್ವತೋಮುಖ ಪ್ರಗತಿಯ ದಾರಿದೀಪವಾಗಿದೆ. ಹಾಗಾಗಿ ಡಾ. ಬಿ. ಆರ್. ಅಂಬೇಡ್ಕರ್ ರವರು ಮೂಲಭೂತ ಹಕ್ಕುಗಳಲ್ಲಿ ಸಮಾನತೆಯ ಹಕ್ಕಿಗೆ ಪ್ರಥಮ ಪ್ರಾಶಸ್ತ್ಯ ನೀಡಿದ್ದಾರೆ.

## 6.3 ಸಮಾನತೆಯ ವಿಧಗಳು

A. ಸಮಾನತೆ

- ನೈಸರ್ಗಿಕ ಸಮಾನತೆ
- ನಾಗರಿಕ ಸಮಾನತೆ
- ರಾಜಕೀಯ ಸಮಾನತೆ
- ಆರ್ಥಿಕ ಸಮಾನತೆ
- ಸಾಮಾಜಿಕ ಸಮಾನತೆ

## 1) ***ನೈಸರ್ಗಿಕ ಸಮಾನತೆ*** *(Natural Equality)*

ನಿಸರ್ಗದ ದೃಷ್ಟಿಯಲ್ಲಿ ಎಲ್ಲರೂ ಸಮಾನರು ಮತ್ತು ಹುಟ್ಟಿನಿಂದಲೂ ಎಲ್ಲರೂ ಸಮಾನವಾಗಿಯೇ ಹುಟ್ಟಿದ್ದಾರೆ. ನಿಸರ್ಗ ಮಾನವರಲ್ಲಿ ಯಾವ ಪಕ್ಷಪಾತವನ್ನು ಮಾಡುವುದಿಲ್ಲ. ನೈಸರ್ಗಿಕ ಕೊಡುಗೆಗಳನ್ನು ಎಲ್ಲರೂ ಸರಿಸಮಾನರಾಗಿ ಅನುಭವಿಸುತ್ತಾರೆ. ವಾಸ್ತವಿಕವಾಗಿ ಹುಟ್ಟಿನಿಂದಲೇ ಕೆಲವು ಕಡೆ ಸಮಾನತೆ ಇಲ್ಲ. ಬಲ, ಬುದ್ಧಿ, ಆಕಾರ, ರೂಪ ಆಕೃತಿಗಳಲ್ಲಿ ವ್ಯಕ್ತಿಯಿಂದ ವ್ಯಕ್ತಿಗೆ ವ್ಯತ್ಯಾಸವಿದೆ. ಇವುಗಳನ್ನು ನಿರ್ಮೂಲನೆ ಮಾಡಲು ಯಾರಿಂದಲೂ ಸಾಧ್ಯವಿಲ್ಲ. ಈ ಸಮಾನತೆಯು ಮಾನವ ನಿರ್ಮಿತ ಕೃತಕ ಅಸಮಾನತೆಯನ್ನು ರಾಜ್ಯದ ಕಾನೂನುಗಳ ಮೂಲಕ ತೊಡೆದು ಹಾಕುವುದನ್ನು ಸೂಚಿಸುತ್ತದೆ.

## 2) ***ನಾಗರಿಕ*** *ಸಮಾನತೆ (Civil Equality):*

ಅಂತಸ್ತುಗಳ ಆಧಾರದ ಮೇಲೆ ಭೇದಭಾವ, ಲಿಂಗ, ಭಾಷೆ, ಪ್ರದೇಶ, ಧರ್ಮ ಇವುಗಳ ಆಧಾರದ ಮೇಲೆ ಭೇದ ಭಾವ ಮಾಡದೆ ಎಲ್ಲರಿಗೂ ಒಂದೇ ರೀತಿಯ ಅವಕಾಶಗಳೂ ದೊರೆಯುವಂತಾಗುವುದೇ ನಾಗರಿಕ ಸಮಾನತೆ. ಇದರ ಪ್ರಕಾರ ಎಲ್ಲಾ ಪ್ರಜೆಗಳು ಸಮಾನವಾದ ಹಕ್ಕು ಮತ್ತು ಸ್ವಾತಂತ್ರ್ಯಗಳನ್ನು ಹೊಂದಿರುತ್ತಾರೆ. ಇದರಿಂದ ಪ್ರತಿಯೊಬ್ಬರು ಜೀವಿಸುವ ಹಕ್ಕು, ವಾಕ್ ಮತ್ತು ಅಭಿವ್ಯಕ್ತಿಯ ಸ್ವಾತಂತ್ರ್ಯದ ಹಕ್ಕು, ಧಾರ್ಮಿಕ ಸ್ವಾತಂತ್ರ್ಯದ ಹಕ್ಕುಗಳನ್ನು ಅನುಭವಿಸುತ್ತಾರೆ.

ಪ್ರಜಾಸತ್ತಾತ್ಮಕ ರಾಷ್ಟ್ರಗಳಲ್ಲಿ ನಾಗರಿಕ ಕಾನೂನುಗಳು ಎಲ್ಲರಿಗೂ ಸಮಾನವಾಗಿ ಅನ್ವಯವಾಗುತ್ತವೆ. ಪ್ರತಿಯೊಬ್ಬರಿಗೂ ಕಾನೂನಿನ ನೆರವು, ನ್ಯಾಯದಾನ, ಸುಲಭವಾಗಿ, ಕಡಿಮೆ ವೆಚ್ಚದಲ್ಲಿ ವಿಳಂಬವಿಲ್ಲದೆ ದೊರಕುವಂತಾದಾಗ ನಾಗರಿಕ ಸಮಾನತೆಗೆ ಹೆಚ್ಚು ಮಹತ್ವ ಬರುತ್ತದೆ.

## *3) ರಾಜಕೀಯ ಸಮಾನತೆ (Political Equality):*

ರಾಜ್ಯದ ಆಡಳಿತ ನಿರ್ವಹಣೆಯಲ್ಲಿ ಸರ್ವರಿಗೂ ಸಮಾನ ಅವಕಾಶಗಳನ್ನು ದೊರಕಿಸಿಕೊಡುವುದೇ ರಾಜಕೀಯ ಸಮಾನತೆ. ಇದು ಪ್ರಜಾಪ್ರಭುತ್ವದ ತಳಹದಿಯಾಗಿದೆ. ಇದರ ಪ್ರಕಾರ ಪ್ರಜೆಗಳು ರಾಜ್ಯದ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಲು ಎಲ್ಲರಿಗೂ ಸಮಾನವಾದ ಅವಕಾಶಗಳನ್ನು ದೊರಕಿಸಿಕೊಡುತ್ತದೆ. ಉದಾಹರಣೆಗೆ ಮತ ಚಲಾಯಿಸುವ ಹಕ್ಕು, ಚುನಾವಣೆಯಲ್ಲಿ ಸ್ಪರ್ಧಿಸುವ ಹಕ್ಕು, ಸರಕಾರಿ ಹುದ್ದೆಯನ್ನು ಪಡೆಯುವ ಹಕ್ಕು, ಸರಕಾರವನ್ನು ಟೀಕಿಸುವ ಹಕ್ಕು ಮುಂತಾದವುಗಳನ್ನು ಯಾವುದೇ ತಾರತಮ್ಯವಿಲ್ಲದೆ ಎಲ್ಲ ನಾಗರಿಕರಿಗೂ ಸಮಾನವಾಗಿ ಕೊಡಲಾಗಿರುತ್ತದೆ.

### *4) ಆರ್ಥಿಕ ಸಮಾನತೆ (Economic Equality):*

ಸಾಮರ್ಥ್ಯಕ್ಕೆ ಅನುಗುಣವಾಗಿ ದುಡಿಯುವುದು ಮತ್ತು ಅಗತ್ಯತೆಗೆ ಅನುಗುಣವಾಗಿ ಪಡೆಯುವುದೇ ಆರ್ಥಿಕ ಸಮಾನತೆ. ಆರ್ಥಿಕ ಸಮಾನತೆ ಇಲ್ಲದಿದ್ದರೆ ರಾಜಕೀಯ ಮತ್ತು ನಾಗರಿಕ ಸಮಾನತೆಯು ಅರ್ಥಹೀನವಾಗುತ್ತದೆ. ಆರ್ಥಿಕ ಸಮಾನತೆ ದೊರಕದ ಹೊರತು. ಸಮಾನತೆಯ ಆಶಯ ಪೂರ್ಣವಾಗಲಾರದು. ರಾಜಕೀಯ ಸಮಾನತೆಯ ಅಸ್ತಿತ್ವಕ್ಕೆ ಆರ್ಥಿಕ ಸಮಾನತೆ ಅವಶ್ಯಕವಾಗಿರುತ್ತದೆ. ಆರ್ಥಿಕ ಸಮಾನತೆಯು ಹೆಚ್ಚು ಪ್ರಾಮುಖ್ಯತೆ ಹೊಂದಿರುತ್ತದೆ. ಇದು ಹಂಚಿಕೆ ನ್ಯಾಯದ ನಿಜವಾದ ಸತ್ವವಾಗಿರುತ್ತದೆ. ಹೆಚ್. ಜೆ. ಲಾಸ್ಕಿ ಯವರ ಪ್ರಕಾರ "ಆರ್ಥಿಕ ಸಮಾನತೆ ಇರದೆ ರಾಜಕೀಯ ಸಮಾನತೆ ನೈಜವಾಗಲಾರದು. ಆರ್ಥಿಕ ಸಮಾನತೆ ಇಲ್ಲದಿದ್ದರೆ ರಾಜಕೀಯ ಅಧಿಕಾರ ಆರ್ಥಿಕ ಶಕ್ತಿಯ ಕೈಗೊಂಬೆಯಾಗುತ್ತದೆ."

ನಾಗರಿಕರು ಅರ್ಥಿಕವಾಗಿ ಸುಭದ್ರವಾದಷ್ಟು ಸಂವಿಧಾನ ಅವರಿಗೆ ನೀಡಿದ ವಿವಿಧ ಪ್ರಕಾರದ ಹಕ್ಕುಗಳನ್ನು ಅನುಭವಿಸಲು ಸಾಧ್ಯವಾಗುತ್ತದೆ. ಆರ್ಥಿಕ ಅಸಮಾನತೆ ರಾಜ್ಯದಲ್ಲಿ ತಲೆದೋರದಂತೆ ಸರಕಾರ ಸೂಕ್ತವಾದ ಯೋಜನೆಗಳನ್ನು ಕೈಗೊಳ್ಳದಿದ್ದರೆ, ಉಳ್ಳವರು ಇಲ್ಲದವರನ್ನು ಶೋಷಣೆ ಮಾಡುವುದು ಮುಂದುವರಿಯುತ್ತದೆ. ಆರ್ಥಿಕ ಸಮಾನತೆ ದುಡಿಮೆಗೆ ತಕ್ಕ ಉದ್ಯೋಗದ ಅವಕಾಶಗಳಲ್ಲಿ ಸಮಾನತೆ ಮತ್ತು ಸ್ವಾವಲಂಬಿ ಜೀವನವನ್ನು ಪ್ರತಿಪಾದಿಸುತ್ತದೆ. ನಾಗರಿಕರ ಆರ್ಥಿಕ ಅಸಮಾನತೆಯನ್ನು ತೊಡೆದು ಹಾಕಲು ಪ್ರಯತ್ನಿಸುತ್ತದೆ.

**ಪ್ರೊ. ಹೆಚ್. ಜೆ. ಲಾಸ್ಕಿಯವರ ಪ್ರಕಾರ:** "ತನ್ನ ನೆರೆಹೊರೆಯವರು ಹೊಟ್ಟೆಗೆ ರೊಟ್ಟಿಯ ಚೂರು ಇಲ್ಲದೆ ನರಳುತ್ತಿರುವಾಗ ನಾನು ಕೇಕನ್ನು ತಿನ್ನುವ ಹಕ್ಕನ್ನು ಹೊಂದಿಲ್ಲದಿರುವುದೇ ಸಮಾನತೆಯಾಗಿರುತ್ತದೆ."

### *5) ಸಾಮಾಜಿಕ ಸಮಾನತೆ (Social Equality):*

ಸಮಾಜದಲ್ಲಿ ಜಾತಿ, ಧರ್ಮ, ಲಿಂಗ ಮತ್ತು ಅಂತಸ್ತುಗಳ ಆಧಾರದ ಮೇಲೆ ತಾರತಮ್ಯ ಮಾಡದೇ ಎಲ್ಲರನ್ನು ಸಮಾನವಾಗಿ ಪರಿಗಣಿಸಿ ಗೌರವಿಸುವುದೇ ಸಾಮಾಜಿಕ ಸಮಾನತೆ. ಜಾತಿ ಪದ್ಧತಿ, ವರ್ಣಭೇದ ನೀತಿ, ಅಸ್ಪೃಶ್ಯತೆಯಂತಹ ಆಚರಣೆಗಳು ಸಾಮಾಜಿಕ ಸಮಾನತೆಗೆ ಆತಂಕಕಾರಿಯಾಗಿವೆ.

ಸಕಲತೆ, ವಿಕಲತೆ ಹಾಗೂ ಮತ್ತಿತರ ಬೇಧಭಾವಗಳಿಲ್ಲದೆ ಸರ್ವರಿಗೂ ಸಮಾನ ಅವಕಾಶಗಳು ದೊರೆಯುವಂತೆ ಆಗುವ ಸ್ಥಿತಿಗತಿಗಳೇ ಸಮಾನತೆಯಾಗಿದೆ. ಒಟ್ಟಿನಲ್ಲಿ ಹೇಳುವುದಾದರೆ ಸಮಾನತೆಯು ಅತ್ಯಮೂಲ್ಯವಾದ ಪರಿಕಲ್ಪನೆಯಾಗಿದೆ. ಎಲ್ಲರೂ ಭೇಧಭಾವಗಳನ್ನು ಮರೆತು ಒಂದಾಗಿ ಬಾಳುವ ಮನೋಭಾವನೆಯನ್ನು ಬೆಳಸುತ್ತದೆ. ಸಮಾನತೆಯು ಸ್ವಾತಂತ್ರ್ಯ ಮತ್ತು ಭ್ರಾತೃತ್ವದಂತಹ ಮೌಲ್ಯಯುತ ವಿಚಾರಗಳಿಗೆ ಸಹಕಾರಿಯಾಗಿದೆ. ವ್ಯಕ್ತಿಯಿಂದ ವಿಶ್ವದವರೆಗೆ ಜಾರಿಯಲ್ಲಿರುವ ಎಲ್ಲ ವ್ಯವಸ್ಥೆಗಳ ತಾರತಮ್ಯರಹಿತ ಅಸ್ತಿತ್ವ ಬೆಳವಣಿಗೆ ಮತ್ತು ನಿರ್ವಹಣೆಗೆ ಪ್ರೇರಣೆಯಾಗಿದೆ. ಸಮಾನತೆಯು ಮಾನವೀಯತೆಯ ನಿಜವಾದ ಸತ್ವಪೂರ್ಣ ತತ್ವವಾಗಿದೆ.

## ಅಭ್ಯಾಸ

**I. ಒಂದು ವಾಕ್ಯಗಳಲ್ಲಿ ಉತ್ತರಿಸಿ:**

1. ಸಮಾನತೆ ಎಂದರೇನು?
2. ನಾಗರಿಕ ಸಮಾನತೆ ಎಂದರೇನು?
3. ಸಾಮಾಜಿಕ ಸಮಾನತೆಯ ಅರ್ಥವನ್ನು ತಿಳಿಸಿ.

**II**. ಬಹು ಆಯ್ಕೆಯ ಪ್ರಶ್ನೆಗಳು:

1. ಸಕಾರಾತ್ಮಕ ಸಮಾನತೆ ಎಂದರೆ _______ .
   a. ಸಮಾಜದ ಎಲ್ಲ ಜನರಿಗೂ ಮೂಲಭೂತ ಅವಶ್ಯಕತೆಗಳನ್ನು ಹೊಂದುವ ಅವಕಾಶ.
   b. ಸರ್ವರಿಗೂ ಸಾಕಷ್ಟು ಅವಕಾಶಗಳಿರುವುದು.
   c. ಕಾನೂನಿನ ಅನುಮೋದನೆ ಪಡೆದ ಸಮಾನತೆ.
   d. ನಿಸರ್ಗದತ್ತವಾಗಿ ದೊರೆತ ಸಮಾನತೆ.
2. ಕಾನೂನಿನ ಮುಂದೆ ಸಮಾನತೆಯು _______ .
   a. ರಾಜಕೀಯ ಸಮಾನತೆ.
   b. ಸಾಮಾಜಿಕ ಸಮಾನತೆ.
   c. ನಾಗರಿಕ ಸಮಾನತೆ.
   d. ಆರ್ಥಿಕ ಸಮಾನತೆ.
3. ಸಾಮಾಜಿಕ ಸಮಾನತೆ ಎಂದರೆ _______ .
   a. ಪ್ರತಿಯೊಬ್ಬರು ತಮ್ಮ ಸ್ಥಾನಮಾನಕ್ಕನುಗುಣವಾಗಿ ಕಾರ್ಯ ನಿರ್ವಹಿಸುವುದು.

b. ಪ್ರಸ್ತುತ ಸಾಮಾಜಿಕ ವ್ಯವಸ್ಥೆಯನ್ನು ಬದಲಾಗಿಸಲು ಯಾವುದೇ ಪ್ರಯತ್ನವನ್ನು ಮಾಡದೆ ಇರುವುದು.

c. ಜಾತಿ, ಧರ್ಮ, ಲಿಂಗ, ಅಂತಸ್ತುಗಳ ಆಧಾರದ ಮೇಲೆ ತಾರತಮ್ಯ ಮಾಡದಿರುವುದು.

d. ದುರ್ಬಲ ವರ್ಗಗಳ ಏಳಿಗೆಗೆ ವಿಶೇಷ ಪ್ರಯತ್ನಗಳನ್ನು ಮಾಡುವುದು.

4. ಭಾರತದಲ್ಲಿರುವ ಜಾತಿಪದ್ಧತಿಯು ಕೆಳಗಿನ ಯಾವ ಸಮಾನತೆಗೆ ವಿರುದ್ಧವಾಗಿದೆ ________ .

a. ರಾಜಕೀಯ ಸಮಾನತೆ.

b. ಧಾರ್ಮಿಕ ಸಮಾನತೆ.

c. ಆರ್ಥಿಕ ಸಮಾನತೆ.

d. ಸಾಮಾಜಿಕ ಸಮಾನತೆ.

**III.** ನಾಲ್ಕು ಅಥವಾ ಐದು ವಾಕ್ಯಗಳಲ್ಲಿ ಉತ್ತರಿಸಿ:

1. ಸಮಾನತೆಯ ವಿಧಗಳನ್ನು ಹೆಸರಿಸಿ.
2. ನೈಸರ್ಗಿಕ ಸಮಾನತೆಯ ಕುರಿತು ವಿವರಿಸಿ.
3. ಆರ್ಥಿಕ ಸಮಾನತೆಯ ಮಹತ್ವವನ್ನು ತಿಳಿಸಿ.

**IV. ಎಂಟು ಅಥವಾ ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

1. ಸಮಾನತೆಯ ಪ್ರಾಮುಖ್ಯತೆಯನ್ನು ವಿಮರ್ಶಿಸಿ.
2. "ಸಮಾನತೆ ಇಲ್ಲದೆ ಸ್ವಾತಂತ್ರ್ಯ ಅರ್ಥಹೀನ" ಸಮರ್ಥಿಸಿ.

**ಸಲಹಾತ್ಮಕ ಚಟುವಟಿಕೆಗಳು:**

1. ಅಂಗವಿಕಲರಿಗೆ ಸಹಾನುಭೂತಿಗಿಂತಲೂ ಸಮಾನ ಅವಕಾಶಗಳಿರಬೇಕು ಎಂಬುದರ ಕುರಿತು ಚರ್ಚಿಸಿ.
2. ಭಾರತದಲ್ಲಿ ಸ್ತ್ರೀ ಸಮಾನತೆಯ ಅಗತ್ಯತೆ ಕುರಿತು ಪ್ರಬಂಧ ಬರೆಯಿರಿ.

## ಅಧ್ಯಾಯ- 7 ನ್ಯಾಯ (Justice)

**ಕಲಿಕಾ ಉದ್ದೇಶಗಳು:**

ಯದ ಅರ್ಥವನ್ನು ತಿಳಿಯುವುದು.

ಯದ ವ್ಯಾಖ್ಯೆಗಳನ್ನು ಮನನ ಮಾಡಿಕೊಳ್ಳುವುದು.

ಯದ ಪ್ರಾಮುಖ್ಯತೆಯನ್ನು ಮೆಚ್ಚಿಕೊಳ್ಳುವುದು.

ಯದ ವಿಧಗಳನ್ನು ಗುರುತಿಸುವುದು.

"ನ್ಯಾಯವು ಸಮಾಜವನ್ನು ಒಂದಾಗಿ ಸೇರಿಸುವ ಬೆಸುಗೆಯಾಗಿದೆ." - ಸಬೈನ್

### ಪೀಠಿಕೆ:

ಜೀವಿಗಳೆಲ್ಲರ ಜೀವನ ನಿರ್ದಿಷ್ಟ ಕ್ರಮದಲ್ಲಿ ಸಾಗಬೇಕಾದರೆ ನಿಯಂತ್ರಣವೆಂಬ ಸಾಧನ ಒಂದು ಇರಲೇಬೇಕು. ಯಾಕೆಂದರೆ ಹುಟ್ಟಿನಿಂದ ಎಲ್ಲರೂ ಸಮಾನರೆಂದು ನಾವು ಭಾವಿಸಿದರೂ ಇಲ್ಲಿ ಅಸಮಾನತೆ ತಾಂಡವವಾಡುತ್ತಿರುತ್ತದೆ. ಶ್ರೇಷ್ಠರು- ಕನಿಷ್ಠರು, ಬಡವರು-ಶ್ರೀಮಂತರು, ಆಳುವವರು-ಆಳಿಸಿಕೊಳ್ಳುವವರು ಹೀಗೆ ವರ್ಗಸಹಿತ ಸಮಾಜ ನಮ್ಮ ಮುಂದಿದೆ. ಅವಕಾಶಗಳೆಲ್ಲವನ್ನು ತಮ್ಮದಾಗಿಸಿಕೊಳ್ಳುವ ಗುಂಪಿನ ಮಧ್ಯೆ ಅವಕಾಶ ವಂಚಿತ ಗುಂಪು ಗೋಚರಿಸುತ್ತದೆ. ಈ ಗೋಜಲು ವ್ಯವಸ್ಥೆಯನ್ನು ಸೂಕ್ತವಾಗಿ ಸಂಯೋಜಿಸಿ, ಸಮನ್ವಯಗೊಳಿಸುವ ಅದ್ಭುತ ಮೌಲ್ಯವೇ 'ನ್ಯಾಯ'. ಇದು ಪ್ರತಿಯೊಬ್ಬರ ಹಿತರಕ್ಷಣೆಯ ಗುರಿಯನ್ನು ಹೊಂದಿದೆ. ಕಾನೂನುಗಳೆಂಬ ಕಡಿವಾಣಗಳ ಮೂಲಕ ವ್ಯಕ್ತಿಗಳ ಚಟುವಟಿಕೆಗಳನ್ನು ನಿಯಂತ್ರಿಸಿ ಶಾಂತಿ, ಸುವ್ಯವಸ್ಥೆಯನ್ನು ಕಾಪಾಡುವ ಮಹತ್ತರ ಜವಾಬ್ದಾರಿಯನ್ನು ನಿರ್ವಹಿಸುತ್ತದೆ. ಕತ್ತಲೆಯಲ್ಲಿ ದಾರಿಕಾಣದೆ ಬಳಲುವವರ ಬದುಕಿಗೆ ಆಶಾಕಿರಣವಾಗಿ ಗೋಚರಿಸುತ್ತದೆ. ಧೈರ್ಯವನ್ನು ತುಂಬುತ್ತದೆ. ಬದುಕನ್ನು ಕಟ್ಟಿಕೊಳ್ಳಲು ಸಹಕರಿಸುತ್ತದೆ.

### 7.1 ಅರ್ಥ ಮತ್ತು ವ್ಯಾಖ್ಯೆಗಳು:

ರಾಜ್ಯಶಾಸ್ತ್ರದಲ್ಲಿ ನ್ಯಾಯವು ಸ್ವಾತಂತ್ರ್ಯ, ಸಮಾನತೆಯಂತೆಯೇ ಬಹಳ ಮುಖ್ಯವಾದ ಪರಿಕಲ್ಪನೆಯಾಗಿದೆ. ಜಸ್ಟಿಸ್ ಅಥವಾ ನ್ಯಾಯ ಎಂಬ ಪದವು ಲಾಟಿನ ಭಾಷೆಯ 'ಜಸ್' ಎಂಬ ಪದದಿಂದ ಬಂದಿದೆ. ಜಸ್ಟೀಷಿಯ ಎಂದರೆ ಸಂಯೋಜಿಸುವುದು, ಸಮನ್ವಯಗೊಳಿಸುವುದು, ಜೋಡಿಸುವುದು ಎಂದರ್ಥ. ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವ ಎಂಬ ಮೂಲ ತತ್ವಗಳನ್ನು ಸಮನ್ವಯಗೊಳಿಸುವ ಪ್ರಕ್ರಿಯೆಯೇ ನ್ಯಾಯ. ಈ

ಮೂರು ಮೂಲತತ್ವಗಳು ಒಟ್ಟಿಗೆ ಸೇರಿದಾಗ ಒಂದು ಉತ್ತಮ ಸಮಾಜ ನಿರ್ಮಾಣವಾಗುತ್ತದೆ.

**ೀರವರ ಪ್ರಕಾರ:** "ಸರ್ವರಿಗೂ ಸಮಾನ ಅವಕಾಶಗಳನ್ನು ಒದಗಿಸಿಕೊಡುವುದೇ ನ್ಯಾಯ."

**ಸ್ ಅಕ್ವಿನಾಸ್‌ರವರ ಪ್ರಕಾರ:** "ಪ್ರತಿಯೊಬ್ಬರಿಗೂ ಅವರದೇ ಆದ ಹಕ್ಕುಗಳನ್ನು ನೀಡುವ ಷ್ಟ ಮತ್ತು ನಿರಂತರವಾದ ಸಂಕಲ್ಪವೇ ನ್ಯಾಯ".

**ರ್ ಮಾರ್ಕ್ಸ್‌ರವರ ಪ್ರಕಾರ:** "ವರ್ಗರಹಿತ ಮತ್ತು ರಾಜ್ಯರಹಿತ ಸಮಾಜದ ರಚನೆಯ ಲತತ್ವವೇ ನ್ಯಾಯ".

**ಸ್ಟ್ ಬಾರ್ಕರ್‌ರವರ ಪ್ರಕಾರ:** "ರಾಜಕೀಯ ಮೌಲ್ಯಗಳ ಸಂಯೋಜನೆ ಮತ್ತು ಸಮನ್ವಯವೇ ಯ".

ಈ ಮೇಲ್ಕಂಡ ವ್ಯಾಖ್ಯೆಗಳನ್ನು ಅವಲೋಕಿಸಿದಾಗ ವ್ಯಕ್ತಿಯಿಂದ ವ್ಯಕ್ತಿಗೆ, ಕಾಲ, ಸ್ಥಳ, ಸಂದರ್ಭಾನುಸಾರ ನ್ಯಾಯ ಬದಲಾವಣೆಯಾಗುವುದು ಕಂಡು ಬರುತ್ತದೆ. ಅಂದರೆ ನ್ಯಾಯದ ಪರಿಕಲ್ಪನೆ ನಿರಂತರವಾಗಿ ಪರಿವರ್ತನೆಯಾಗುವ ಗುಣಲಕ್ಷಣಗಳನ್ನು ಹೊಂದಿದೆ. ಒಟ್ಟಿನಲ್ಲಿ ವಿಧಿಬದ್ಧವಾಗಿ ಹಾಗೂ ನೈತಿಕ ದೃಷ್ಟಿಕೋನದಲ್ಲಿ ಸಮಾಜವನ್ನು ಸಾರ್ವತ್ರಿಕವಾಗಿ ವ್ಯವಸ್ಥಿತಗೊಳಿಸುವ ಚೈತನ್ಯಶೀಲ ಧ್ಯೇಯತತ್ವವೇ ನ್ಯಾಯ.

## 7.2 ನ್ಯಾಯದ ಪ್ರಾಮುಖ್ಯತೆ:

ನ್ಯಾಯವು ಆರೋಗ್ಯಕರ ಸಮಾಜದ ರಚನೆಗೆ, ಉಳಿವಿಗೆ ಮತ್ತು ಉನ್ನತಿಗೆ ಅತ್ಯವಶ್ಯಕವಾದ ತಾತ್ವಿಕ ಸಾಧನವಾಗಿದೆ. ಇದರ ಪ್ರಾಮುಖ್ಯತೆಯನ್ನು ಈ ಕೆಳಕಂಡ ಅಂಶಗಳಿಂದ ತಿಳಿಯಬಹುದಾಗಿದೆ.

1. ನ್ಯಾಯವು ಪ್ರಜೆಗಳು ರಾಜ್ಯದ ಕಾನೂನುಗಳಿಗೆ ನಿರಂತರವಾಗಿ ಗೌರವವನ್ನು ನೀಡುವ ಮನೋಭಾವವನ್ನು ಮೂಡಿಸುತ್ತದೆ.
2. ನ್ಯಾಯವು ಕಾನೂನುಗಳಿಗೆ ಮೌಲ್ಯವನ್ನು, ತತ್ವ ಸಿದ್ಧಾಂತವನ್ನು ನೀಡುತ್ತದೆ.
3. ಸ್ವಾತಂತ್ರ್ಯ, ಸಮಾನತೆ ಹಾಗೂ ಭಾತೃತ್ವಗಳ ನಡುವೆ ಸಮನ್ವಯತೆಯನ್ನು ಉಂಟುಮಾಡುತ್ತದೆ.
4. ಸಾಮಾಜಿಕ, ರಾಜಕೀಯ, ಆರ್ಥಿಕ, ಶೈಕ್ಷಣಿಕ ಕ್ಷೇತ್ರಗಳಲ್ಲಿ ದುರ್ಬಲವರ್ಗ ಹಾಗೂ ಮಹಿಳೆಯರು ಪ್ರಗತಿಯನ್ನು ಸಾಧಿಸುವಲ್ಲಿ ನ್ಯಾಯ ಪ್ರಮುಖ ಪಾತ್ರವನ್ನು ನಿರ್ವಹಿಸುತ್ತದೆ.
5. ರಾಜ್ಯದ ಸಂಪನ್ಮೂಲಗಳು ಮತ್ತು ಅವಕಾಶಗಳು ನ್ಯಾಯೋಚಿತ ಹಂಚಿಕೆಯಾಗಲು ಅಗತ್ಯವಾಗಿರುತ್ತದೆ.

6. ಪ್ರತಿಯೊಬ್ಬ ವ್ಯಕ್ತಿಯ ಘನತೆ, ಗೌರವಕ್ಕೆ ಮನ್ನಣೆ ಮತ್ತು ಪ್ರಾಮುಖ್ಯತೆಯನ್ನು ನೀಡುತ್ತದೆ.

## 7.3 ನ್ಯಾಯದ ವಿಧಗಳು

ಸ್ವರೂಪದ ಆಧಾರದ ಮೇಲೆ ನ್ಯಾಯುವನ್ನು ಈ ಕೆಳಕಂಡಂತೆ ವರ್ಗೀಕರಿಸಲಾಗಿದೆ.

1. **ನ್ಯಾಯ**
   1. ಕಾನೂನುಬದ್ಧ ನ್ಯಾಯ
   2. ರಾಜಕೀಯ ನ್ಯಾಯ
   3. ಸಾಮಾಜಿಕ ನ್ಯಾಯ
   4. ಆರ್ಥಿಕ ನ್ಯಾಯ

### *1) ವಿಧಿಬದ್ಧ ನ್ಯಾಯ: (Legal Justice)*

ವಿಧಿಬದ್ಧ ನ್ಯಾಯವನ್ನು ಮೂಲತಃ ಆಸ್ಟಿನ್, ಬೆಂಥಾವ, ಡೈಸಿ ಮೊದಲಾದವರು ಪ್ರತಿಪಾದಿಸಿದ್ದಾರೆ. ಅಸ್ತಿತ್ವದಲ್ಲಿರುವ ಕಾನೂನುಗಳನ್ನು ಜಾರಿಗೊಳಿಸುವುದರ ಮೂಲಕ ಆಡಳಿತವನ್ನು ನಡೆಸುವುದೇ ಕಾನೂನುಬದ್ಧ ನ್ಯಾಯ. ಇದು ಅಧಿಕಾರದ ದುರುಪಯೋಗವನ್ನು ನಿಯಂತ್ರಿಸಿ ಪ್ರಜೆಗಳ ಸ್ವಾತಂತ್ರ್ಯವನ್ನು ರಕ್ಷಿಸುತ್ತದೆ. ಕಾನೂನುಬದ್ಧ ನ್ಯಾಯವು ಅಸ್ತಿತ್ವದಲ್ಲಿ ಇರದಿದ್ದರೆ ಸರ್ಕಾರವು ನಿರಂಕುಶವಾಗಿ ವರ್ತಿಸುತ್ತದೆ. ಕಾನೂನಿನ ಮುಂದೆ ಎಲ್ಲರೂ ಸಮಾನರು. ಕಾನೂನನ್ನು ಉಲ್ಲಂಘಿಸಿದರೆ ಶಿಕ್ಷೆ ವಿಧಿಸಲಾಗುವುದು.

ಕಾನೂನುಬದ್ಧ ನ್ಯಾಯವನ್ನು ಸಾಕ್ರೆಟಿಸ್, ಪ್ಲೇಟೋ, ಅರಿಸ್ಟಾಟಲ್, ಸಿಸಿರೊ ಮತ್ತು ಆಸ್ಟಿನ್ ಪ್ರತಿಪಾದಿಸಿದರು. ಸ್ವಸ್ಥ ಸಮಾಜದ ನಿರ್ಮಾಣಕ್ಕೆ ಅದರ ಅಗತ್ಯತೆಯನ್ನು ಒತ್ತಿ ಹೇಳಿದರು.

### *2) ಸಾಮಾಜಿಕ ನ್ಯಾಯ: (Social Justice)*

ಸಮಾಜದಲ್ಲಿ ಶೋಷಣೆ ಮತ್ತು ಅಸಮಾನತೆಗಳು ಇಲ್ಲವಾಗಿಸುವುದೇ ಸಾಮಾಜಿಕ ನ್ಯಾಯ. ಅಂದರೆ ಸಮಾಜದಲ್ಲಿನ ಸರ್ವರ ಕ್ಷೇಮಾಭಿವೃದ್ಧಿ ಹಾಗೂ ಪಕ್ಷಪಾತಗಳ ನಿರ್ಮೂಲನೆ ಇದರ ಗುರಿಗಳಾಗಿವೆ. ಜಾತಿ, ಧರ್ಮ, ವರ್ಣ, ಲಿಂಗ ಮತ್ತು ಅಂತಸ್ತುಗಳ ಆಧಾರದ ಮೇಲೆ ಯಾವುದೇ ತಾರತಮ್ಯವನ್ನು ಮಾಡದಿರುವುದೇ ಸಾಮಾಜಿಕ ನ್ಯಾಯ. ಸರ್ವರಿಗೂ ತಮ್ಮ ವ್ಯಕ್ತಿತ್ವ ವಿಕಾಸಕ್ಕಾಗಿ ಸಮಾನ ಅವಕಾಶಗಳನ್ನು ದೊರಕಿಸಿ ಕೊಡುವುದು ಇದರ ಮುಖ್ಯ ಉದ್ದೇಶವಾಗಿದೆ.

ಇದರ ಅನುಷ್ಠಾನಕ್ಕಾಗಿ ಸಮಾಜದಲ್ಲಿನ ಶೋಷಣೆ, ಬಡತನ, ಗುಲಾಮಗಿರಿ, ಅನಕ್ಷರತೆ ಮುಂತಾದವುಗಳನ್ನು ನಿರ್ಮೂಲನೆಗೊಳಿಸಿದಾಗ ಸಾಮಾಜಿಕ ನ್ಯಾಯ ಸ್ಥಾಪನೆಯಾಗುತ್ತದೆ. ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದ ವರ್ಗಗಳ ಹಾಗೂ ಸ್ತ್ರೀಯರ ಪ್ರಗತಿಗಾಗಿ ರಾಜ್ಯವು ಕೈಗೊಳ್ಳುವ ಎಲ್ಲಾ ಪ್ರಯತ್ನಗಳು ಸಾಮಾಜಿಕ ನ್ಯಾಯಕ್ಕೆ ಪೂರಕವಾಗಿರುತ್ತವೆ. ಉದಾಹರಣೆಗೆ ಭಾರತ ಸಂವಿಧಾನದಲ್ಲಿ ಸಾಮಾಜಿಕ ನ್ಯಾಯವನ್ನು ಸಾಕಾರಗೊಳಿಸುವ ಉದ್ದೇಶದಿಂದ ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಆರ್ಥಿಕವಾಗಿ ಹಿಂದುಳಿದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ, ಇತರೆ ಹಿಂದುಳಿದ ವರ್ಗಗಳು ಹಾಗೂ ಮಹಿಳೆಯರಿಗೆ ಉಚಿತ ಶಿಕ್ಷಣ, ವಿದ್ಯಾರ್ಥಿ ನಿಲಯ, ವಿದ್ಯಾರ್ಥಿ ವೇತನ, ಉದ್ಯೋಗದಲ್ಲಿ ಮೀಸಲಾತಿ ಮತ್ತು ಸೌಲಭ್ಯಗಳನ್ನು ಒದಗಿಸಿರುವುದು ಸಾಮಾಜಿಕ ನ್ಯಾಯಕ್ಕೆ ಉದಾಹರಣೆಗಳಾಗಿವೆ.

### *3) ರಾಜಕೀಯ ನ್ಯಾಯ: (Political Justice)*

ಜಾತಿ, ಧರ್ಮ, ವರ್ಣ, ಲಿಂಗ, ಅಂತಸ್ತುಗಳ ಆಧಾರದ ಮೇಲೆ ಯಾವುದೇ ತಾರತಮ್ಯ ಮಾಡದೆ ಎಲ್ಲಾ ಪ್ರಜೆಗಳಿಗೆ ರಾಜ್ಯದ ಆಡಳಿತದಲ್ಲಿ ಮುಕ್ತವಾಗಿ ಭಾಗವಹಿಸಲು ಸಮಾನ ಅವಕಾಶಗಳನ್ನು ನೀಡುವುದೇ ರಾಜಕೀಯ ನ್ಯಾಯ. ಮತದಾನದ ಹಕ್ಕು, ಚುನಾವಣೆಯಲ್ಲಿ ಸ್ಪರ್ಧಿಸುವ ಹಕ್ಕು, ಸರಕಾರವನ್ನು ಟೀಕಿಸುವ ಹಕ್ಕು ಮುಂತಾದ ರಾಜಕೀಯ ಹಕ್ಕುಗಳು ಎಲ್ಲಾ ಪ್ರಜೆಗಳಿಗೂ ಏಕಪ್ರಕಾರವಾಗಿ ದಯಪಾಲಿಸಲ್ಪಟ್ಟಿವೆ. ಇವುಗಳನ್ನು ಚಲಾಯಿಸಿ ಅನುಭವಿಸಲು ಅವಕಾಶವಿದೆ.

**ರಾಜಕೀಯ ನ್ಯಾಯವನ್ನು ವ್ಯವಸ್ಥಿತವಾಗಿ ಅನುಷ್ಠಾನಗೊಳಿಸಲು ಅಗತ್ಯ ಅಂಶಗಳೆಂದರೆ:**

1. ವಯಸ್ಕ ಮತದಾನದ ಮೂಲಕ ಸರ್ಕಾರವನ್ನು ರಚಿಸುವುದು.
2. ಸಂವಿಧಾನಾತ್ಮಕ ಸರಕಾರಗಳ ರಚನೆಗೆ ಅವಕಾಶ ಮಾಡುವುದು.
3. ಪ್ರಜಾಸತ್ತಾತ್ಮಕ ಸಂಸ್ಥೆಗಳನ್ನು ಬಲಪಡಿಸುವುದು.
4. ಪ್ರಜಾಭಿಪ್ರಾಯಕ್ಕೆ ಮನ್ನಣೆ ನೀಡುವುದು.

### *4) ಆರ್ಥಿಕ ನ್ಯಾಯ: (Econimic Justice)*

ಜಾತಿ, ಧರ್ಮ, ಲಿಂಗ, ಅಂತಸ್ತುಗಳ ಆಧಾರದ ಮೇಲೆ ಯಾವುದೇ ತಾರತಮ್ಯ ಮಾಡದೆ ಎಲ್ಲರಿಗೂ ಆರ್ಥಿಕ ಹಕ್ಕುಗಳನ್ನು ನೀಡುವುದೇ ಆರ್ಥಿಕ ನ್ಯಾಯ. ಆರ್ಥಿಕ ನ್ಯಾಯವು ಸಾಮಾಜಿಕ ಹಾಗೂ ರಾಜಕೀಯ ನ್ಯಾಯಗಳ ಆಧಾರಸ್ತಂಭವಾಗಿದೆ.

ಆರ್ಥಿಕವಾಗಿ ಹಿಂದುಳಿದ ವರ್ಗಗಳ ಮತ್ತು ತುಳಿತಕ್ಕೊಳಪಟ್ಟವರ ಹಾಗೂ ದುರ್ಬಲ ವರ್ಗದವರ ಆರ್ಥಿಕ ಸ್ಥಿತಿಗತಿಗಳನ್ನು ಉತ್ತಮಪಡಿಸುವುದು ಆರ್ಥಿಕ ನ್ಯಾಯದ ಮುಖ್ಯ

ಉದ್ದೇಶವಾಗಿದೆ. ಲಾಸ್ಕಿಯವರು 'ಪ್ರತಿಯೊಬ್ಬರಿಗೂ ಒಂದು ಸೂರು ಸಿಗುವ ತನಕ 20 ಕೋಣೆಗಳಿರುವ ಮಹಾಮನೆ ಒಬ್ಬನಿಗಿರಬಾರದು' ಎಂದಿದ್ದಾರೆ. ಆರ್ಥಿಕ ನ್ಯಾಯ ಅನುಷ್ಠಾನನಗೊಳ್ಳಲು ಆರ್ಥಿಕ ಸಂಪನ್ಮೂಲ ಕೆಲವೇ ಜನರ ಕೈಯಲ್ಲಿ ಕೇಂದ್ರೀಕೃತವಾಗಬಾರದು. ಇದು ನ್ಯಾಯೋಚಿತವಾಗಿ ಹಂಚಿಕೆಯಾಗಬೇಕು.

ಆಧುನಿಕ ಕಾಲದಲ್ಲಿ ಆರ್ಥಿಕ ನ್ಯಾಯವೆಂದರೆ ಮುಖ್ಯವಾಗಿ ಪ್ರತಿಯೊಬ್ಬರಿಗೂ ಜೀವಿಸಲು ಕನಿಷ್ಠ ಅವಶ್ಯಕತೆಗಳಾದ ಅನ್ನ, ವಸ್ತ್ರ, ವಸತಿ, ಅರೋಗ್ಯ ಮತ್ತು ಶಿಕ್ಷಣ ಹೊಂದುವುದಾಗಿದೆ. ಇದು ಸಾಕಾರಗೊಳ್ಳಬೇಕಾದರೆ ಬಡತನ, ನಿರುದ್ಯೋಗ, ಆರ್ಥಿಕ ಶೋಷಣೆ ನಿರ್ಮೂಲನೆ, ಭ್ರಷ್ಟಾಚಾರದ ನಿಯಂತ್ರಣ ಮಾಡುವುದು ಅತ್ಯಗತ್ಯವಾಗಿರುತ್ತದೆ.

ಒಟ್ಟಿನಲ್ಲಿ ನ್ಯಾಯವಿಲ್ಲದೆ, ಸ್ವಾತಂತ್ರ್ಯ ಸಮಾನತೆ ಇರುವುದಿಲ್ಲ. ಸ್ವಾತಂತ್ರ್ಯಕ್ಕೆ ಉತ್ತಮ ಕಾನೂನಿನ ಅವಶ್ಯಕತೆ ಇದೆ. ನ್ಯಾಯವು ವಿವಿಧ ಮೌಲ್ಯಗಳ ನಡುವೆ ಸಮನ್ವಯತೆಯನ್ನು ತರುವ ಸಾಧನವಾಗಿದೆ. ಬುದ್ಧಿಜೀವಿಯಾದ ಮಾನವನನ್ನು ಗೌರವಯುತವಾಗಿ ಕಾಣುವುದು ಮತ್ತು ಸಕಲರೊಂದಿಗೆ ಸಮಾನತೆಯ ತತ್ವದ ಅಡಿಯಲ್ಲಿ ತರುವುದು ನ್ಯಾಯದ ಪರಮಗುರಿಯಾಗಿದೆ. ಸ್ವಾತಂತ್ರ್ಯದ ಸೌಲಭ್ಯಗಳನ್ನು ಸರ್ವರಿಗೂ ಸಮಾನವಾಗಿ ದೊರಕುವಂತೆ ಮಾಡುವುದು ಮತ್ತು ಸಮಾಜದಲ್ಲಿನ ವಿವಿಧ ತಾರತಮ್ಯ, ಶೋಷಣೆಗಳ ನಿಯಂತ್ರಣಗಳ ಜೊತೆಗೆ ಅಲ್ಪಸಂಖ್ಯಾತರ ಹಕ್ಕು ಮತ್ತು ಹಿತಾಸಕ್ತಿಗಳನ್ನು ಕಾಪಾಡಿದಾಗ ನ್ಯಾಯ ವಿಜೃಂಭಿಸುತ್ತದೆ.

## ಅಭ್ಯಾಸ

**I**. ಒಂದು ವಾಕ್ಯದಲ್ಲಿ ಉತ್ತರಿಸಿ:

1. ನ್ಯಾಯದ ಮೂಲಪದ ಯಾವುದು?
2. ನ್ಯಾಯ ಎಂದರೇನು?
3. ಸಾಮಾಜಿಕ ನ್ಯಾಯ ಎಂದರೇನು?
4. ಕಾನೂನುಬದ್ಧ ನ್ಯಾಯ ಎಂದರೇನು?
5. ಆರ್ಥಿಕ ನ್ಯಾಯ ಎಂದರೇನು?

**II. ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ:**

1. ನ್ಯಾಯದ ವಿಧಗಳು ಯಾವುವು?
2. ಸಾಮಾಜಿಕ ನ್ಯಾಯಕ್ಕಾಗಿ ಹೋರಾಡಿದ ಮಹನೀಯರುಗಳನ್ನು ಹೆಸರಿಸಿ.
3. ರಾಜಕೀಯ ನ್ಯಾಯ ಎಂದರೇನು?
4. ನ್ಯಾಯದ ಎರಡು ವ್ಯಾಖ್ಯಾನಗಳನ್ನು ತಿಳಿಸಿ.
5. ಪ್ರಮುಖ ರಾಜಕೀಯ ಹಕ್ಕುಗಳನ್ನು ತಿಳಿಸಿ.

**III.** ನಾಲ್ಕು ಅಥವಾ ಐದು ವಾಕ್ಯಗಳಲ್ಲಿ ಉತ್ತರಿಸಿ:

1. ಆರ್ಥಿಕ ನ್ಯಾಯದ ಅಗತ್ಯತೆಯನ್ನು ಬರೆಯಿರಿ.
2. ಸಾಮಾಜಿಕ ನ್ಯಾಯದ ಪ್ರಾಮುಖ್ಯತೆಯನ್ನು ತಿಳಿಸಿ.
3. ರಾಜಕೀಯ ನ್ಯಾಯವನ್ನು ಅನುಷ್ಠಾನಗೊಳಿಸುವ ಅಗತ್ಯ ಅಂಶಗಳನ್ನು ತಿಳಿಸಿ.

**IV**. ಎಂಟು ಅಥವಾ ಹತ್ತು ವಾಕ್ಯಗಳಲ್ಲಿ ಉತ್ತರಿಸಿ:

1. ನ್ಯಾಯದ ಪ್ರಾಮುಖ್ಯತೆಯನ್ನು ವಿವರಿಸಿ
2. ನ್ಯಾಯದ ವಿಧಗಳನ್ನು ವಿವರಿಸಿ.

**ಸಲಹಾತ್ಮಕ ಚಟುವಟಿಕೆ:**

ನಿಮ್ಮ ಸ್ಥಳೀಯ ನ್ಯಾಯಾಲಯಕ್ಕೆ ಶಿಕ್ಷಕರೊಡನೆ ಭೇಟಿ ನೀಡಿ, ನ್ಯಾಯಾಲಯದ ಕಾರ್ಯವನ್ನು ಅವಲೋಕಿಸಿ.

## ಅಧ್ಯಾಯ- 8 ಹಕ್ಕು ಮತ್ತು ಕರ್ತವ್ಯಗಳು (Rights and Duties)

**ಕಲಿಕಾ ಉದ್ದೇಶಗಳು:**

1. ಹಕ್ಕು ಮತ್ತು ಕರ್ತವ್ಯಗಳ ಅರ್ಥವನ್ನು ತಿಳಿಯುವುದು.
2. ಹಕ್ಕುಗಳ ಸ್ವರೂಪವನ್ನು ಅರಿಯುವುದು.
3. ಹಕ್ಕು ಮತ್ತು ಕರ್ತವ್ಯಗಳ ವಿಧಗಳನ್ನು ಗುರುತಿಸುವುದು.
4. ಹಕ್ಕು ಮತ್ತು ಕರ್ತವ್ಯಗಳ ಮಹತ್ವವನ್ನು ಅರ್ಥೈಸಿಕೊಳ್ಳುವುದು.

"ಸಮಾಜದಿಂದ ಮಾನ್ಯತೆ ಪಡೆದ ರಾಜ್ಯದಿಂದ ಅನುಷ್ಠಾನಗೊಳಿಸಲ್ಪಟ್ಟ ಜನರ ಬೇಡಿಕೆಗಳೇ ಹಕ್ಕುಗಳು". **ಬೊಸಾಂಕ್ವೆಟ್.**

### ಪೀಠಿಕೆ:

ರಾಜ್ಯದಲ್ಲಿ ಮಾನವನು ಉತ್ತಮ ಜೀವನ ನಡೆಸಬೇಕಾದರೆ ಹಕ್ಕುಗಳು ಅಗತ್ಯ. ವ್ಯಕ್ತಿಯ ವ್ಯಕ್ತಿತ್ವದ ಸರ್ವತೋಮುಖ ಅಭಿವೃದ್ಧಿಗೆ ಅಗತ್ಯವಾದ ಎಲ್ಲಾ ಅಂಶಗಳೇ ಹಕ್ಕುಗಳು. ಇವು ವ್ಯಕ್ತಿಗೆ ಪ್ರಾಣವಾಯುವಿದ್ದಂತೆ, ಅಲ್ಲದೆ ವ್ಯಕ್ತಿ ಸ್ವಾತಂತ್ರ್ಯ ಮತ್ತು ಸಾಮಾಜಿಕ ನಿಯಂತ್ರಣಗಳ ನಡುವೆ ಸಾಮರಸ್ಯವನ್ನು ವೃದ್ಧಿಸುತ್ತವೆ. ಹಕ್ಕುಗಳ ಭರವಸೆ ನೀಡದ ರಾಜ್ಯವು ಅಮಾನವೀಯ ಮತ್ತು ಅರಾಜಕತೆ ರಾಜ್ಯವಾಗುತ್ತದೆ. ಆದ್ದರಿಂದಲೇ ರಾಜ್ಯವು ಪ್ರಜೆಗಳಿಗೆ ತನ್ನ ಆಡಳಿತ ವ್ಯವಸ್ಥೆಯಲ್ಲಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಭಾಗವಹಿಸಲು ಹಕ್ಕುಗಳನ್ನು ನೀಡುತ್ತದೆ. ಇದರಿಂದಾಗಿ ಉತ್ತಮ ಸಂತುಷ್ಟ ಸಮಾಜ ನಿರ್ಮಾಣ ಸಾಧ್ಯ. ಆದ್ದರಿಂದ ಹೆಚ್. ಜೆ. ಲಾಸ್ಕಿಯವರು "ಮಾನವನ ಸಮಗ್ರ ಬೆಳವಣಿಗೆಗೆ ಅವಶ್ಯಕವಾಗಿರುವ ಸಾಮಾಜಿಕ ಸ್ಥಿತಿಗಳೇ ಹಕ್ಕುಗಳು ಎಂದು ಅಭಿಪ್ರಾಯಪಟ್ಟಿದ್ದಾರೆ."

### 8.1 ಹಕ್ಕುಗಳ ಅರ್ಥ:

ಹಕ್ಕು ಅಥವಾ Right ಎಂಬ ಶಬ್ದವು ಲಾಟಿನ್ ಭಾಷೆಯ rectus (ರಿಕ್ಟಸ್) ಎಂಬ ಪದದಿಂದ ಬಂದಿದೆ. ಇದರ ಅರ್ಥ 'ಸರಿಯಾದ ಪದದಲ್ಲಿ ಚಲನೆ' (Moment in a straight line). ಹಕ್ಕುಗಳು ನಾಗರಿಕ ಸಮಾಜದ ಅವಿಭಾಜ್ಯ ಅಂಗವಾಗಿವೆ. ಆದ್ದರಿಂದ ಅವುಗಳನ್ನು ಈ ಕೆಳಗಿನಂತೆ ವ್ಯಾಖ್ಯಾನಿಸಬಹುದು.

### 8.2: ಹಕ್ಕುಗಳ ವ್ಯಾಖ್ಯೆಗಳು:

1. **ಪ್ರೊ. ರಾಬರ್ಟ್‌ಸನ್ ರವರ ಪ್ರಕಾರ:** "ಮಾನವನ ಸರ್ವತೋಮುಖ ಬೆಳವಣಿಗೆಗೆ ಸಹಾಯಕವಾಗುವ ಹಾಗೂ ಅವನ ಬೇಕು ಬೇಡಗಳಿಗೆ ಸ್ಪಂದಿಸುವ ಅವಶ್ಯಕತೆಗಳೇ ಹಕ್ಕುಗಳು".
2. **ಬೆನ್ನಿಪ್ರಸಾದ್ ರವರ ಪ್ರಕಾರ:** "ಜನರ ವ್ಯಕ್ತಿತ್ವ ವಿಕಾಸಕ್ಕೆ ಸಹಾಯಕವಾಗಿರುವ ಸಾಮಾಜಿಕ ಕರಾರುಗಳೇ ಹಕ್ಕುಗಳು".
3. **ಎಚ್. ಟಿ. ಗ್ರೀನ್ ರವರ ಪ್ರಕಾರ:** "ಮಾನವನ ವ್ಯವಹಾರ ಮತ್ತು ನೈತಿಕ ಅಸ್ತಿತ್ವವನ್ನು ನೆರವೇರಿಸಿಕೊಡುವ ಅತ್ಯವಶ್ಯಕ ಶಕ್ತಿಯೇ ಹಕ್ಕುಗಳು."
4. **ಎಚ್. ಜೆ. ಲಾಸ್ಕಿ ಯವರ ಪ್ರಕಾರ:** "ಮಾನವನ ಜೀವನವನ್ನು ಉತ್ತಮಪಡಿಸಿಕೊಳ್ಳಲು ನೆರವಾಗುವ ಸಾಮಾಜಿಕ ಪರಿಸ್ಥಿತಿಗಳೇ ಹಕ್ಕುಗಳು."

## 8.3 ಹಕ್ಕುಗಳ ಸ್ವರೂಪ:

ಹಕ್ಕುಗಳಿಗೆ ಅದರದೇ ಆದ ವಿಶಿಷ್ಟ ಸ್ವರೂಪವಿದೆ. ಈ ಕೆಳಕಂಡ ಲಕ್ಷಣಗಳಿಂದ ಅದರ ಸ್ವರೂಪವು ಧೃಡಪಡುತ್ತದೆ.

1. ಹಕ್ಕುಗಳು ನಿಸರ್ಗದತ್ತವಾದವುಗಳಾಗಿವೆ.
2. ಹಕ್ಕುಗಳು ಸಮಾಜದಿಂದ ಸ್ವೀಕೃತವಾದವುಗಳಾಗಿವೆ.
3. ಹಕ್ಕುಗಳು ಪರಮ ಶ್ರೇಷ್ಠವಾದವುಗಳು.
4. ಹಕ್ಕುಗಳು ಗತಶೀಲವಾದವುಗಳಾಗಿವೆ.
5. ಹಕ್ಕುಗಳು ವಿಶ್ವವಿಧಿತವಾಗಿವೆ.
6. ಹಕ್ಕುಗಳು ಮತ್ತು ಕರ್ತವ್ಯಗಳು ಪರಸ್ಪರ ಪೂರಕವಾಗಿವೆ.
7. ಬಹುತೇಕ ಹಕ್ಕುಗಳು ಕಾನೂನಿನ ಮಾನ್ಯತೆಯನ್ನು ಹೊಂದಿದೆ.

## 8.4: ಹಕ್ಕುಗಳ ಪ್ರಾಮುಖ್ಯತೆ:

ಹಕ್ಕುಗಳು ಆಧುನಿಕ ಜಗತ್ತಿನಲ್ಲಿ ಮಹತ್ವ ಪಡೆದಿವೆ. ಹಕ್ಕುಗಳ ಬಗ್ಗೆ ಜನರು ಜಾಗೃತರಾಗಿದ್ದು ಹಲವಾರು ಕ್ರಾಂತಿಗಳಾಗಿವೆ. ಇಂದಿಗೂ ಪ್ರಪಂಚದ ಅನೇಕ ಭಾಗಗಳಲ್ಲಿ ಜನರು ತಮ್ಮ ನ್ಯಾಯಬದ್ಧ ಹಕ್ಕುಗಳಿಗಾಗಿ ಹೋರಾಡುತ್ತಿದ್ದಾರೆ. ಅವುಗಳು ಈ ಕೆಳಕಂಡಂತಿವೆ.

1. ವ್ಯಕ್ತಿಯ ಅಸ್ತಿತ್ವಕ್ಕೆ ಪೂರಕವಾಗಿದೆ:

   ಪ್ರಾಣವಾಯುವಿನಂತಿರುವ ಹಕ್ಕುಗಳು ವ್ಯಕ್ತಿಗೆ ಅಸ್ತಿತ್ವವನ್ನು ತಂದುಕೊಡುತ್ತವೆ ವ್ಯಕ್ತಿಯ ನಿಜವಾದ ಅಧಿಕಾರವೇ ಹಕ್ಕುಗಳು.

2. ವ್ಯಕ್ತಿಯ ವ್ಯಕ್ತಿತ್ವ ವಿಕಾಸಕ್ಕೆ ಸಹಕಾರಿ:

ವ್ಯಕ್ತಿಯ ವ್ಯಕ್ತಿತ್ವದ ಸರ್ವತೋಮುಖ ಅಭಿವೃದ್ಧಿಯಲ್ಲಿ ಹಕ್ಕುಗಳು ಮಹತ್ವದ ಪಾತ್ರ ವಹಿಸುತ್ತವೆ. ಅವು ಸ್ವಾತಂತ್ರ್ಯ ಮತ್ತು ಸಮಾನತೆಯ ಪರಿಸ್ಥಿತಿಯನ್ನು ನಿರ್ಮಾಣ ಮಾಡಿ ಒಬ್ಬ ವ್ಯಕ್ತಿ ಪರಿಪೂರ್ಣನಾಗಲು ಅನೇಕ ಅವಕಾಶಗಳನ್ನು ಒದಗಿಸಿಕೊಡುತ್ತವೆ. ಈ ಅವಕಾಶವನ್ನು ವ್ಯಕ್ತಿಯು ಸರಿಯಾದ ರೀತಿಯಲ್ಲಿ ಬಳಸಿಕೊಂಡರೆ ತನ್ನ ವ್ಯಕ್ತಿತ್ವವನ್ನು ವಿಕಾಸಗೊಳಿಸಿಕೊಳ್ಳಬಹುದಾಗಿದೆ.

3. ಜಾಗೃತ ಸಮಾಜದ ನಿರ್ಮಾಣ:

ವಿವಿಧ ಸ್ವರೂಪದ ಹಕ್ಕುಗಳಿಂದ ವ್ಯಕ್ತಿತ್ವವನ್ನು ವಿಕಸನಗೊಳಿಸಿಕೊಂಡು ವಿಚಾರವಂತರಾದ ವ್ಯಕ್ತಿಗಳು ಸಮಾಜದ ನಿರ್ಮಾಣಕ್ಕೆ ಕೊಡುಗೆ ನೀಡುತ್ತಾರೆ. ಸಮಾಜದೊಳಗಿನ ಲೋಪದೋಷಗಳನ್ನು ನಿವಾರಿಸಲು ಬೇಕಾದ ವಿಚಾರಗಳನ್ನು, ಧೋರಣೆಗಳನ್ನು, ಧ್ಯೇಯ-ದೃಷ್ಟಿಗಳನ್ನು ತಮ್ಮ ಮಾತು ಮತ್ತು ಬರವಣಿಗೆಗಳ ಮೂಲಕ ವ್ಯಕ್ತಪಡಿಸುತ್ತಾರೆ. ಸಮಾಜದ ಮೂಢನಂಬಿಕೆ ಮತ್ತು ಗೊಡ್ಡು ಸಂಪ್ರದಾಯಗಳು, ಆಚರಣೆಗಳು ಹಾಗೂ ಮತ್ತಿತರ ಪಿಡುಗುಗಳ ವಿರುದ್ಧ ಜಾಗೃತರಾಗುವಂತೆ ಸಾಮಾಜಿಕ ಪ್ರಜ್ಞೆಯನ್ನು ಬೆಳೆಸುತ್ತಾರೆ. ಇವರ ಹಕ್ಕುಗಳಿಂದಾಗಿಯೇ ಜಾಗೃತ ಸಮಾಜದ ನಿರ್ಮಾಣದ ಕನಸು ನನಸಾಗುತ್ತದೆ.

4. ರಾಜ್ಯದ ಅಭಿವೃದ್ಧಿಗೆ ಪೂರಕ:

ಸಮಾಜದ ತೊಟ್ಟಿಲಲ್ಲಿ ಹುಟ್ಟಿದ ರಾಜ್ಯ ಪ್ರಜೆಗಳ ಹಕ್ಕಿನಿಂದಲೇ ಅಸ್ತಿತ್ವದಲ್ಲಿ ಮುಂದುವರಿಯುತ್ತದೆ. ಪ್ರಜಾಭಿವೃದ್ಧಿಯಿಂದಲೇ ರಾಜ್ಯದ ಅಭಿವೃದ್ಧಿ ಸಾಧ್ಯವಾಗುತ್ತದೆ. ಆದ್ದರಿಂದ ರಾಜ್ಯವು ಪ್ರಜೆಗಳ ಹಕ್ಕು ಮತ್ತು ಸ್ವಾತಂತ್ರ್ಯಗಳ ಸಂರಕ್ಷಣೆಯ ಸಾಧನವಾಗಿ ತನ್ನ ನಿರಂತರ ಅಭಿವೃದ್ಧಿಯನ್ನು ಸಾಧಿಸಿಕೊಳ್ಳುತ್ತದೆ.

5) ಉತ್ತಮ ಸರಕಾರದ ರಚನೆ:

ಪ್ರಜೆಗಳಿಗೆ ನೀಡಲಾದ ರಾಜಕೀಯ ಹಕ್ಕುಗಳಿಂದಾಗಿ ಜನರಿಗೆ ರಾಜಕೀಯ ಶಿಕ್ಷಣ ದೊರಕುತ್ತದೆ. ರಾಜಕೀಯ ಶಿಕ್ಷಣದಿಂದ ರಾಜಕೀಯ ಪ್ರಜ್ಞೆ ಬೆಳೆಯುತ್ತದೆ. ರಾಜಕೀಯ ಪ್ರಜ್ಞೆ ಬೆಳೆದಾಗ ರಾಜ್ಯಾಡಳಿತ ಬಲಗೊಳ್ಳುತ್ತದೆ.

6) ರಾಷ್ಟ್ರೀಯ ಘನತೆಯ ಸಂಕೇತ:

ಹಕ್ಕುಗಳೇ ರಾಷ್ಟ್ರದ ಘನತೆಯನ್ನು ನಿರ್ಣಯಿಸುವ ಮಾನದಂಡಗಳಾಗಿವೆ. ಪ್ರಜೆಗಳಿಗೆ ಹಕ್ಕುಗಳನ್ನು ದಯಪಾಲಿಸದ ರಾಜ್ಯವು ಸಹಜವಾಗಿಯೇ ಅಂತರರಾಷ್ಟ್ರೀಯ ಸಮುದಾಯದಲ್ಲಿ ಹೆಚ್ಚು ಗೌರವವನ್ನು ಪಡೆಯುತ್ತದೆ. ಪ್ರಜೆಗಳಿಗೆ ಹಕ್ಕನ್ನು ನಿರಾಕರಿಸುವ ರಾಜ್ಯವು ಅಂತರರಾಷ್ಟ್ರೀಯ ಖಂಡನೆಗೆ ಗುರಿಯಾಗುತ್ತದೆ.

**ಹಕ್ಕುಗಳ ವಿಧಗಳು:**

ಹಕ್ಕುಗಳ ವಿಧಗಳನ್ನು ಈ ಕೆಳಗಿನಂತೆ ವರ್ಗೀಕರಿಸಲಾಗಿದೆ.

1. ಹಕ್ಕು
    A. ನೈತಿಕ ಹಕ್ಕುಗಳು
    B. ಶಾಸನಬದ್ಧ ಹಕ್ಕುಗಳು
        1. ನಾಗರಿಕ ಹಕ್ಕುಗಳು
            a. ಜೀವಿಸುವ ಹಕ್ಕು
            b. ಸ್ವಾತಂತ್ರ್ಯದ ಹಕ್ಕು
            c. ಧಾರ್ಮಿಕ ಸ್ವಾತಂತ್ರ್ಯದ ಹಕ್ಕು
            d. ವಾಕ್ ಸ್ವಾತಂತ್ರ್ಯದ ಹಕ್ಕು
            e. ಪತ್ರಿಕಾ ಸ್ವಾತಂತ್ರ್ಯದ ಹಕ್ಕು
            f. ಸಂಘ ಸಂಸ್ಥೆಗಳ ಸ್ಥಾಪನೆಯ ಹಕ್ಕು
            g. ಆಸ್ತಿಯ ಹಕ್ಕು
            h. ವಿಚಾರ ಸ್ವಾತಂತ್ರ್ಯದ ಹಕ್ಕು
            i. ಕೌಟುಂಬಿಕ ಹಕ್ಕು, ಶಿಕ್ಷಣದ ಹಕ್ಕು.
            j. ಸತ್ಕೀರ್ಥೀಯ ಹಕ್ಕು
        2. ರಾಜಕೀಯ ಹಕ್ಕುಗಳು
            a. ಮತದಾನದ ಹಕ್ಕು,
            b. ಚುನಾವಣೆಯಲ್ಲಿ ಸ್ಪರ್ಧಿಸುವ ಹಕ್ಕು,
            c. ಸಾರ್ವಜನಿಕ ಹುದ್ದೆ ಪಡೆಯುವ ಹಕ್ಕು
            d. ಸರ್ಕಾರವನ್ನು ಟೀಕಿಸುವ ಹಕ್ಕು,
            e. ಸರ್ಕಾರಕ್ಕೆ ಮನವಿ ಸಲ್ಲಿಸುವ ಹಕ್ಕು
        3. ಆರ್ಥಿಕ ಹಕ್ಕುಗಳು
            a. ಉದ್ಯೋಗದ ಹಕ್ಕು,
            b. ಸಮಾನ ವೇತನದ ಹಕ್ಕು
            c. ವಿರಾಮ ಮತ್ತು ವಿಶ್ರಾಂತಿಯ ಹಕ್ಕು
            d. ಆಸ್ತಿಯ ಹಕ್ಕು, ಕೈಗಾರಿಕೆಯ ಹಕ್ಕು

### *1. ನೈತಿಕ ಹಕ್ಕುಗಳು: (Moral Rights)*

ನೈತಿಕ ಹಕ್ಕುಗಳು ಸಮಾಜದ ನೈತಿಕ ಬೆಂಬಲದ ಮೇಲೆ ಅಸ್ತಿತ್ವದಲ್ಲಿರುವ ಹಕ್ಕುಗಳೇ ನೈತಿಕ ಹಕ್ಕುಗಳು. ಇವು ವ್ಯಕ್ತಿ ಮತ್ತು ಸಮಾಜದ ನಂಬಿಕೆ ಮತ್ತು ಆತ್ಮಸಾಕ್ಷಿಯನ್ನು ಅವಲಂಬಿಸಿದೆ. ಈ ಹಕ್ಕುಗಳಿಗೆ ಕಾನೂನಿನ ಬೆಂಬಲವಿಲ್ಲ. ಅವುಗಳ ಉಲ್ಲಂಘನೆಯಾದರೆ ಕಾನೂನು ಕ್ರಮ ಕೈಗೊಳ್ಳಲು ಸಾಧ್ಯವಿಲ್ಲ. ಸಮಾಜದ ರೂಢಿ, ಸಂಪ್ರದಾಯ, ನೀತಿ ಜನಾಭಿಪ್ರಾಯಗಳೇ ಈ ಹಕ್ಕಿಗೆ ಮೂಲ ನೆಲೆಗಳಾಗಿವೆ. ಉದಾಹರಣೆಗೆ ಗುರು ಹಿರಿಯರನ್ನು ಗೌರವಿಸುವುದು, ತಂದೆ ತಾಯಿಯರ ಹಾರೈಕೆ, ದು:ಖಿತರಿಗೆ ಸಹಾಯ ಮಾಡುವುದು ಇತ್ಯಾದಿ.

### *2. ಶಾಸನಬದ್ಧ ಹಕ್ಕುಗಳು: (Legal Rights)*

ರಾಜ್ಯದ ಕಾನೂನುಗಳಿಂದ ಮಾನ್ಯತೆ ಪಡೆದ ಹಕ್ಕುಗಳೇ ಶಾಸನಬದ್ಧ ಹಕ್ಕು. ಇದನ್ನು ಉಲ್ಲಂಘಿಸಿದರೆ ಕಾನೂನು ರೀತಿ ಕ್ರಮ ಕೈಗೊಳ್ಳಲಾಗುತ್ತದೆ ಮತ್ತು ಈ ಹಕ್ಕುಗಳನ್ನು ಕಸಿಯಲು ಪ್ರಯತ್ನಿಸಿದರೆ ನ್ಯಾಯಾಲಯದ ಮೊರೆ ಹೋಗಬಹುದು. ಉದಾಹರಣೆಗೆ ವರದಕ್ಷಿಣೆ ಕಿರುಕುಳ, ಬಾಲಕಾರ್ಮಿಕ ಪದ್ಧತಿ, ಬಾಲ್ಯವಿವಾಹ ಇತ್ಯಾದಿ., ಶಾಸನಬದ್ಧ ಹಕ್ಕುಗಳನ್ನು ಮೂರು ವಿಭಾಗಗಳಾಗಿ ವರ್ಗೀಕರಿಸಬಹುದಾಗಿದೆ. ಅವುಗಳೆಂದರೆ:

1. ನಾಗರಿಕ ಹಕ್ಕುಗಳು.
2. ರಾಜಕೀಯ ಹಕ್ಕುಗಳು.
3. ಆರ್ಥಿಕ ಹಕ್ಕುಗಳು.

**1) ನಾಗರಿಕ ಹಕ್ಕುಗಳು**: (Civil Rights)

ವ್ಯಕ್ತಿಯು ಸಮಾಜದಲ್ಲಿ ಶಾಂತಿಯುತವಾದ ಮತ್ತು ನೆಮ್ಮದಿಯ ಜೀವನವನ್ನು ನಡೆಸಲು ಅವಶ್ಯವಾಗಿರುವ ಹಕ್ಕುಗಳೇ ನಾಗರಿಕ ಹಕ್ಕುಗಳು.

2) ರಾಜಕೀಯ ಹಕ್ಕುಗಳು: **(**Political Rights)

ರಾಜ್ಯದಲ್ಲಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಭಾಗವಹಿಸುವ, ನಾಗರಿಕರಿಗಿರುವ ಅವಕಾಶಗಳೇ ರಾಜಕೀಯ ಹಕ್ಕುಗಳು. ಮತ ಚಲಾಯಿಸುವ, ಚುನಾವಣೆಯಲ್ಲಿ ಸ್ಪರ್ಧಿಸುವ, ಸರ್ಕಾರಕ್ಕೆ ಮನವಿ ಸಲ್ಲಿಸುವ, ಸಾರ್ವಜನಿಕ ಉದ್ಯೋಗಾವಕಾಶಗಳನ್ನು ಪಡೆಯುವ ಹಾಗೂ ಸಾರ್ವಜನಿಕ ನೀತಿಗಳನ್ನು ವಿಮರ್ಶಿಸುವ ಹಕ್ಕುಗಳೆಲ್ಲವೂ ರಾಜಕೀಯ ಹಕ್ಕುಗಳಾಗಿವೆ.

### *3) ಆರ್ಥಿಕ ಹಕ್ಕುಗಳು:*

ಮಾನವನು ಹಸಿವು, ದಾರಿದ್ರ್ಯ ಮತ್ತು ನಿರುದ್ಯೋಗದಂತಹ ಸಮಸ್ಯೆಗಳಿಂದ ಮುಕ್ತನಾಗಿ ತನ್ನ ಮೂಲಭೂತ ಆರ್ಥಿಕ ಅವಶ್ಯಕತೆಗಳನ್ನು ಈಡೇರಿಸಿಕೊಂಡು ತನ್ನ ಜೀವನಮಟ್ಟವನ್ನು ಸುಧಾರಿಸಿಕೊಳ್ಳಲು ಇರುವ ಅವಕಾಶಗಳೇ ಆರ್ಥಿಕ ಹಕ್ಕುಗಳಾಗಿವೆ.

ಉದಾಹರಣೆ: ದುಡಿಮೆಯ ಹಕ್ಕು, ಸಮಾನವೇತನದ ಹಕ್ಕು, ಆಸ್ತಿಯ ಹಕ್ಕು, ವಿರಾಮ ವಿಶ್ರಾಂತಿಯ ಹಕ್ಕು, ಕೈಗಾರಿಕೆಯ ಮೇಲೆ ನಿಯಂತ್ರಣದ ಹಕ್ಕು.

ಒಟ್ಟಿನಲ್ಲಿ ಹೇಳುವುದಾದರೆ ಸರ್ವತೋಮುಖ ಬೆಳವಣಿಗೆಗೆ ನೆರವಾಗುವ ಅಂಶಗಳೇ ಹಕ್ಕುಗಳಾಗಿವೆ. ರಾಜ್ಯ ಒಂದರ ನಾಗರಿಕತೆ ಮತ್ತು ಸಂಸ್ಕøತಿಯ ಗುಣಮಟ್ಟವನ್ನು ನಿರ್ಧರಿಸುವ ಅಳತೆಗೋಲುಗಳಾಗಿವೆ. ಇವುಗಳ ಭರವಸೆ ನೀಡಿ ಸಂರಕ್ಷಿಸುವ ರಾಜ್ಯವು ಪ್ರಜಾಭಿವೃದ್ಧಿ ರಾಜ್ಯವಾಗಿ ತನ್ನ ಪ್ರಾಮುಖ್ಯತೆಯನ್ನು ಉಳಿಸಿಕೊಳ್ಳುತ್ತದೆ.

## **8.6** ಕರ್ತವ್ಯಗಳು (Duties)

ಹಕ್ಕು ಮತ್ತು ಕರ್ತವ್ಯಗಳು ಒಂದು ನಾಣ್ಯದ ಎರಡು ಮುಖಗಳಾಗಿವೆ. ಹಕ್ಕನ್ನು ಅನುಭವಿಸುವ ಪ್ರಜೆ ರಾಜ್ಯದಿಂದ ಪಡೆದ ಹಕ್ಕುಗಳಿಗೆ ಪ್ರತಿಯಾಗಿ ತನ್ನ ರಾಷ್ಟ್ರಕ್ಕಾಗಿ ಕೆಲವು ಕರ್ತವ್ಯಗಳನ್ನು ನಿರ್ವಹಿಸಬೇಕಾದುದು ಅಗತ್ಯವಾಗಿದೆ. ಆದ್ದರಿಂದ ಎಲ್ಲರಿಗೂ ಕರ್ತವ್ಯಗಳ ಬಗ್ಗೆ ಸೂಕ್ತ ತಿಳುವಳಿಕೆ ಇರಬೇಕಾದುದು ಅವಶ್ಯಕ.

**ಜಾನ್ ಎಫ್. ಕೆನಡಿ** ಯವರ ಮಾತಿನಲ್ಲಿ ಹೇಳುವುದಾದರೆ "ದೇಶ ನನಗೆ ಏನು ಕೊಟ್ಟಿತು ಎನ್ನುವುದಕ್ಕಿಂತ ನಾನು ದೇಶಕ್ಕೆ ಏನೂ ಕೊಡಬಲ್ಲೆ ಎಂಬುದು ಮುಖ್ಯ". ಅದರಂತೆ ನಾವು ಶ್ರದ್ಧೆಯಿಂದ ರಾಷ್ಟ್ರಕ್ಕೆ ಸೇವೆ ಸಲ್ಲಿಸುವುದೇ ನಮ್ಮ ಜೀವನದ ಒಂದು ಗುರಿಯಾಗಬೇಕು.

### *ಕರ್ತವ್ಯಗಳ ಅರ್ಥ:*

ಕರ್ತವ್ಯ ಎನ್ನುವ ಶಬ್ಧ ಆಂಗ್ಲಭಾಷೆಯ Duty ಎಂಬ ಶಬ್ಧದ ಕನ್ನಡ ರೂಪಾಂತರವಾಗಿದೆ. Duty ಎಂಬ ಪದದ ಮೂಲ ಲ್ಯಾಟಿನ್ ಭಾಷೆಯ ಡೆಬಿರ (Debire) ಎಂಬ ಶಬ್ಧದಿಂದ ಬಂದಿದೆ. ಇದರ ಅರ್ಥ. "ಏನನ್ನಾದರೂ ಅಥವಾ ಯಾರನ್ನಾದರೂ ಅನುಸರಿಸು ಎಂದು".

ಹಿಂದೆ ಇದು ಸರ್ಕಾರಿ ಉದ್ಯೋಗಿಗಳು, ಸೈನಿಕರು ಹಾಗೂ ಚರ್ಚಿನ ಸೇವಾ ಸಿಬ್ಬಂದಿಗಳು ಬಳಸುತ್ತಿದ್ದ ಕಟ್ಟು ಪಾಡುಗಳಾಗಿದ್ದವು. ಕಾಲಕ್ರಮೇಣ ಇದು ಸಾಮಾನ್ಯ ನಾಗರಿಕರಿಗೂ ಅನ್ವಯಿಸುವಂತೆ ಕರ್ತವ್ಯಗಳಾಗಿ ಮಾರ್ಪಾಡಾದವು.

ಸಮಾಜದಲ್ಲಿ ಬದುಕುತ್ತಿರುವ ನಮ್ಮಲ್ಲಿ ನೂರಾರು ಪ್ರಶ್ನೆಗಳು ಉದ್ಭವಿಸುತ್ತವೆ. ಸುತ್ತಮುತ್ತಲಿನ ಪರಿಸರ, ಸಮಾಜ, ರಾಜ್ಯ ಇವು ನಮ್ಮ ಬದುಕಿಗೆ ಆಸರೆಯಾಗಿವೆ. ಆದರೆ ಅವು ನೀಡುವ ಕೊಡುಗೆಗೆ ಪ್ರತಿಯಾಗಿ ನಾವು ಏನನ್ನು ಕೊಡುತ್ತಿರುವೆವು? ಹೀಗೆ ಯೋಚಿಸಿದಾಗ ನಾವು ಕೆಲವು ಕರ್ತವ್ಯಗಳನ್ನು ನಿರ್ವಹಿಸಬೇಕಾದುದು ಅವಶ್ಯವಾಗಿರುತ್ತದೆ.

ಹೀಗೆ ವ್ಯಕ್ತಿಯು ತನ್ನ ಕುಟುಂಬ, ಸಮಾಜ ಹಾಗೂ ರಾಜ್ಯಕ್ಕೆ ನಿಷ್ಠನಾಗಿ ನಿರ್ವಹಿಸಬೇಕಾದ ಹೊಣೆಗಾರಿಕೆಗಳೇ ಕರ್ತವ್ಯಗಳಾಗಿವೆ. ಪ್ರತಿಯೊಬ್ಬರು ಪರಸ್ಪರ ಸಹಕಾರ,

ಸೇವೆ ನಿಸ್ವಾರ್ಥತೆಗಳಿಂದ ಮಾಡುವ ಸೇವೆಗಳೇ ಕರ್ತವ್ಯಗಳಾಗಿವೆ.

### *ಕರ್ತವ್ಯಗಳ ಮಹತ್ವ:*

ರಾಜ್ಯ ಮತ್ತು ಸಮಾಜದ ಅವಿಭಾಜ್ಯ ಅಂಗವಾದ ನಾಗರಿಕರು ಪರಿಪಾಲಿಸಲೇಬೇಕಾದ ಸಾಮಾಜಿಕ ನಿಯಮಗಳು ಮತ್ತು ಬಾಧ್ಯತೆಗಳ ಸಂಕಲನವೇ ಕರ್ತವ್ಯಗಳು. ಉತ್ತಮ ಪ್ರಜೆಗಳ ನಿರ್ಮಾಣಕ್ಕೆ ಎಡೆ ಮಾಡಿಕೊಡುತ್ತವೆ. ಹಕ್ಕುಗಳಿಗಿಂತಲೂ ಕರ್ತವ್ಯಪ್ರಜ್ಞೆಯುಳ್ಳ ಪ್ರಜೆಗಳಿಂದ ರಾಜ್ಯ ಮತ್ತು ಸಮಾಜದಲ್ಲಿರುವ ದುಷ್ಕೃತ್ಯಗಳನ್ನು ತಡೆಗಟ್ಟಬಹುದಾಗಿದೆ. ಪ್ರಜೆಗಳ ಕರ್ತವ್ಯಪ್ರಜ್ಞೆಯಿಂದಲೇ ನಾಗರಿಕರೆಲ್ಲರ ಹಕ್ಕು ಸ್ವಾತಂತ್ರ್ಯಗಳು ಸುರಕ್ಷಿತವಾಗಿರುತ್ತವೆ. ಹಕ್ಕು ಮತ್ತು ಕರ್ತವ್ಯಗಳ ಸಾಮರಸ್ಯದಿಂದಲೇ ಸಮಾಜದೊಳಗಿನ ಜನರ ಹಿತಾಸಕ್ತಿಯಲ್ಲಿಯು ಸಾಮರಸ್ಯ ಉಂಟಾಗುತ್ತದೆ. ಸಂಕ್ಷಿಪ್ತವಾಗಿ ಹೇಳುವುದಾದರೆ ನೈತಿಕ ಮತ್ತು ಶಾಸನೀಯ ಕರ್ತವ್ಯಗಳ ಪರಿಪಾಲನೆಯಿಂದ ಆದರ್ಶ ಪ್ರಜೆಗಳಾಗಿ ಸಹಕಾರಯುತ ಸಮಾಜ ಮತ್ತು ರಾಜ್ಯ ನಿರ್ಮಾಣಗೊಳ್ಳುತ್ತದೆ. ಇದೆಲ್ಲವೂ ಕರ್ತವ್ಯಗಳ ಮಹತ್ವವನ್ನು ಧೃಡಪಡಿಸುತ್ತದೆ.

### *ಕರ್ತವ್ಯಗಳ ವಿಧಗಳು:*

ಕರ್ತವ್ಯದ ಸ್ವರೂಪವು ಏಕಪ್ರಕಾರವಾಗಿಲ್ಲ. ಆದ್ದರಿಂದ ಅವುಗಳನ್ನು ಸ್ವಭಾವಕ್ಕನುಗುಣವಾಗಿ ವರ್ಗೀಕರಿಸಲಾಗಿದೆ. ಅವುಗಳೆಂದರೆ:

1. ಕರ್ತವ್ಯಗಳು
   a. **ನೈತಿಕ ಕರ್ತವ್ಯಗಳು**
   b. **ಶಾಸನೀಯ ಕರ್ತವ್ಯಗಳು**
      1. **ಕಾನೂನಿನ ಪರಿಪಾಲನೆ**
      2. **ತೆರಿಗೆ ಪಾವತಿ**
      3. **ರಾಜ್ಯಕ್ಕೆ ನಿಷ್ಠೆ**
      4. **ಮತ ಚಲಾವಣೆ**
      5. **ಶಾಂತಿ ಸುವ್ಯವಸ್ಥೆ**

1) ನೈತಿಕ ಕರ್ತವ್ಯಗಳು:

ಕಾನೂನುಗಳ ನಿರ್ಬಂಧನೆಯಿಲ್ಲದೆ ಸ್ವಇಚ್ಛೆಯಿಂದ ಎಲ್ಲರ ಒಳಿತಿಗಾಗಿ ನಿರ್ವಹಿಸುವ ಬಾಧ್ಯತೆಗಳೇ ನೈತಿಕ ಕರ್ತವ್ಯಗಳಾಗಿವೆ. ನೈತಿಕ ಕರ್ತವ್ಯಗಳು ಸರ್ವವ್ಯಾಪ್ತಿಯು ಮತ್ತು ಸರ್ವಕಾಲಿಕವಾದವುಗಳು. ಉದಾಹರಣೆಗೆ ತಂದೆ ತಾಯಿಗಳ ಹಾರೈಕೆ, ಗುರು ಹಿರಿಯರಿಗೆ

ವಿಧೇಯತೆ ತೋರಿಸುವುದು. ಬಡವರಿಗೆ, ದುರ್ಬಲರಿಗೆ, ರೋಗಿಗಳಿಗೆ ಸಹಾಯ ಮಾಡುವುದು ಮುಂತಾದವು ನೈತಿಕ ಕರ್ತವ್ಯಗಳಾಗಿವೆ.

2) ಶಾಸನಬದ್ಧ ಕರ್ತವ್ಯಗಳು:

ರಾಜ್ಯದ ಕಾನೂನಿನ ಮಾನ್ಯತೆ ಮತ್ತು ಬೆಂಬಲ ಪಡೆದು ಅನುಷ್ಠಾನಗೊಂಡಿರುವ ಕರ್ತವ್ಯಗಳನ್ನು ಕಾನೂನುಬದ್ಧ ಕರ್ತವ್ಯಗಳು ಎಂದು ಕರೆಯಲಾಗುವುದು. ಈ ಕರ್ತವ್ಯಗಳನ್ನು ಪ್ರತಿಯೊಬ್ಬ ಪ್ರಜೆಯೂ ಪಾಲಿಸಲೇಬೇಕು ಮತ್ತು ಗೌರವಿಸಲೇಬೇಕು. ಶಾಸನಬದ್ಧ ಕರ್ತವ್ಯಗಳನ್ನು ಪಾಲಿಸದವರನ್ನು ಶಿಕ್ಷೆಗೆ ಗುರಿಪಡಿಸಲಾಗುತ್ತದೆ

**ಶಾಸನಬದ್ಧ ಕರ್ತವ್ಯಗಳು ಈ ಕೆಳಗಿನಂತಿವೆ.**

**1) ರಾಜ್ಯಕ್ಕೆ ನಿಷ್ಠೆ: (Loyalty to the State)**

'ದೇಶ ಸೇವೆಯೇ ಈಶ ಸೇವೆ' ಎಂಬಂತೆ ಪ್ರತಿಯೊಬ್ಬ ಪ್ರಜೆಯು ತನ್ನ ರಾಜ್ಯಕ್ಕೆ ನಿಷ್ಠೆಯಿಂದಿರುವುದು ಆದ್ಯ ಕರ್ತವ್ಯವಾಗಿದೆ. ಏಕತೆ ಮತ್ತು ಸಮಗ್ರತೆಯನ್ನು ಕಾಪಾಡಿಕೊಂಡು ದೇಶಕ್ಕೆ ಘನತೆ ಮತ್ತು ಗೌರವವನ್ನು ತೋರುವುದೇ ರಾಜ್ಯಕ್ಕೆ ನಿಷ್ಠೆಯಾಗಿದೆ. ದೇಶದಲ್ಲಿ ತಲೆದೋರುವ ಯಾವುದೇ ರೀತಿಯ ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ಬದ್ಧತೆಯಿಂದ ಇರುವುದು, ರಾಷ್ಟ್ರ ರಕ್ಷಣೆಗೆ ತನ್ನ ಪ್ರಾಣವನ್ನು ತ್ಯಾಗ ಮಾಡಲೂ ಸಿದ್ಧನಾಗಿರುವುದು ಪ್ರತಿಯೊಬ್ಬನ ಆದ್ಯ ಕರ್ತವ್ಯವಾಗಿದೆ.

**2) ಕಾನೂನಿಗೆ ವಿಧೇಯತೆ: (Obedience to Law)**

ಕಾನೂನನ್ನು ಗೌರವಿಸಿ ಪರಿಪಾಲಿಸುವುದು ಪ್ರತಿಯೊಬ್ಬ ಪ್ರಜೆಯ ಶ್ರೇಷ್ಠ ಕರ್ತವ್ಯವಾಗಿದೆ. ಏಕೆಂದರೆ ಕಾನೂನುಗಳಿರುವುದು ಜನರ ಒಳಿತಿಗಾಗಿ ಮತ್ತು ಸಮಾಜದ ಉನ್ನತಿಗಾಗಿ ಕಾನೂನಿನ ಪರಿಪಾಲನೆ ಪ್ರತಿಯೊಬ್ಬ ಪ್ರಜೆಯ ಕರ್ತವ್ಯವಾಗಿದೆ. ಇಲ್ಲವಾದರೆ ರಾಜ್ಯದಲ್ಲಿ ಅರಾಜಕತೆ ಅಶಾಂತಿ ನೆಲಸಬಹುದು. ಆದುದರಿಂದ ಪ್ರತಿಯೊಬ್ಬರು ಕಾನೂನಿಗೆ ತಲೆಬಾಗಲೇಬೇಕು. ಕಾನೂನಿಗೆ ವಿಧೇಯತೆ ತೋರಿಸದಿದ್ದರೆ ಸಮಾಜದ ಅಭಿವೃದ್ಧಿಗೆ ಧಕ್ಕೆ ಉಂಟಾಗುತ್ತದೆ.

3) ಸಕಾಲದಲ್ಲಿ ತೆರಿಗೆ ಪಾವತಿ: (Payment of Taxes)

ರಾಜ್ಯದ ಭದ್ರತೆ, ಅಭಿವೃದ್ಧಿ ಮತ್ತು ನಿರ್ವಹಣೆಗೆ ವಿವಿಧ ಮೂಲಗಳಿಂದ ಅಪಾರ ಪ್ರಮಾಣದ ಸಂಪನ್ಮೂಲಗಳು ಬೇಕಾಗುತ್ತವೆ. ರಾಜ್ಯವು ಈ ಸಂಪನ್ಮೂಲಗಳನ್ನು ಕ್ರೋಢಿಕರಿಸಲು ಜನರಿಂದ ಬರುವ ತೆರಿಗೆಯನ್ನು ಅವಲಂಬಿಸುತ್ತದೆ. ಆದ್ದರಿಂದ ಸಕಾಲದಲ್ಲಿ ರಾಜ್ಯಕ್ಕೆ ತೆರಿಗೆಗಳನ್ನು ಪಾವತಿಸುವುದು ಪ್ರತಿಯೊಬ್ಬ ಪ್ರಜೆಯ ಪರಮೋಚ್ಚ ಕರ್ತವ್ಯವಾಗಿದೆ.

4) ಕಾನೂನು ಸುವ್ಯವಸ್ಥೆ ಕಾಪಾಡುವಲ್ಲಿ ಸರ್ಕಾರಕ್ಕೆ ನೆರವು: (To assist the Government in the maintenance of law and order)

ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ಹಾಗೂ ರಾಜ್ಯದಲ್ಲಿ ಶಾಂತಿ ಕಾನೂನು ಸುವ್ಯವಸ್ಥೆ ಹದಗೆಟ್ಟ ಸಂದರ್ಭದಲ್ಲಿ ಸರಕಾರಕ್ಕೆ ಎಲ್ಲಾ ರೀತಿಯ ನೆರವು ನೀಡುವುದು ಪ್ರಜೆಗಳ ಪರಮ ಶ್ರೇಷ್ಠ ಕರ್ತವ್ಯವಾಗಿದೆ.

ರಾಷ್ಟ್ರ ವಿರೋಧಿ ಚಟುವಟಿಕೆಯಲ್ಲಿ ತೊಡಗಿದವರ ಬಗೆಗೆ ಮಾಹಿತಿ ನೀಡಿ ಕಾನೂನು ಸುವ್ಯವಸ್ಥೆಯ ಪರಿಪಾಲನೆಗೆ ಸಹಕರಿಸುವುದು ಪ್ರತಿಯೊಬ್ಬ ಪ್ರಜೆಯ ಕರ್ತವ್ಯವಾಗಿದೆ. ಯುದ್ಧದಂತಹ ಬಿಕ್ಕಟ್ಟಿನಲ್ಲಿ ಸಿಲುಕಿದಾಗ ರಾಷ್ಟ್ರ ರಕ್ಷಣೆಗೆ ಸಹಕರಿಸುವುದು.

ಹೀಗೆ ರಾಜ್ಯದ ಪ್ರಜೆಗಳು ನೈತಿಕ ಮತ್ತು ಶಾಸನೀಯ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ. ಪ್ರತಿಯೊಬ್ಬ ನಾಗರಿಕನು ಆ ರಾಜ್ಯದ ಕಾನೂನನ್ನು ಹೇಗೆ ಪರಿಪಾಲಿಸುತ್ತಾನೆ ಎಂಬುದರ ಆಧಾರದ ಮೇಲೆ ಆ ರಾಜ್ಯದ ಗೌರವ ಪ್ರತಿಷ್ಠೆ, ಉನ್ನತಿ, ಸಚ್ಚಾರಿತ್ರ್ಯ ಎಲ್ಲವೂ ಪ್ರಕಟಗೊಳ್ಳುತ್ತವೆ.

## 8.7 ಹಕ್ಕುಗಳು ಮತ್ತು ಕರ್ತವ್ಯಗಳ ನಡುವಿನ ಸಂಬಂಧ:

ಮಾನವನ ದೇಹ ಮತ್ತು ಆತ್ಮಗಳ ನಡುವೆ ನಿಕಟ ಬಾಂಧವ್ಯವಿರುವಂತೆ ಹಕ್ಕು ಮತ್ತು ಕರ್ತವ್ಯಗಳ ನಡುವೆ ಆಂತರಿಕ ಸಂಬಂಧವಿದೆ. ಪ್ರೊ. ಲಾಸ್ಕಿರವರು ಹಕ್ಕು ಮತ್ತು ಕರ್ತವ್ಯಗಳ ನಡುವಿನ ಸಂಬಂಧವನ್ನು ಈ ಕೆಳಕಂಡಂತೆ ತಿಳಿಸಿದ್ದಾರೆ.

1. ಒಬ್ಬ ವ್ಯಕ್ತಿಯ ಹಕ್ಕು ಮತ್ತೊಬ್ಬ ವ್ಯಕ್ತಿಯ ಕರ್ತವ್ಯವಾಗಿದೆ. ಒಬ್ಬ ವ್ಯಕ್ತಿಯು ಹಕ್ಕನ್ನು ಹೊಂದಿದ್ದರೆ ಆ ಹಕ್ಕಿಗೆ ಸಂಬಂಧಿಸಿದಂತೆ ಮತ್ತೊಬ್ಬ ವ್ಯಕ್ತಿಯು ಕರ್ತವ್ಯವನ್ನು ಹೊಂದಿರುತ್ತಾನೆ.
2. ಒಬ್ಬ ವ್ಯಕ್ತಿಯ ಕರ್ತವ್ಯವು ಮತ್ತೊಬ್ಬ ವ್ಯಕ್ತಿಯ ಹಕ್ಕಾಗಿರುತ್ತದೆ. ವ್ಯಕ್ತಿಯು ಹಕ್ಕನ್ನು ಅನುಭವಿಸಬೇಕಾದರೆ ಕರ್ತವ್ಯವನ್ನು ಪಾಲಿಸಲೇಬೇಕಾಗುತ್ತದೆ.
3. ರಾಜ್ಯವು ಪ್ರತಿಯೊಬ್ಬ ವ್ಯಕ್ತಿಗೆ ಹಕ್ಕನ್ನು ಮಾನ್ಯ ಮಾಡಿದರೆ ಅದೇ ರೀತಿ ಅದೇ ಹಕ್ಕು ಆ ವ್ಯಕ್ತಿಯ ಕರ್ತವ್ಯವಾಗಿರುತ್ತದೆ. ಉದಾಹರಣೆಗೆ ಮತದಾನ ಮಾಡುವುದು ಕೇವಲ ಹಕ್ಕಾಗಿರದೆ ಕರ್ತವ್ಯವು ಆಗಿದೆ.
4. ರಾಷ್ಟ್ರವು ನಮ್ಮನ್ನು ರಕ್ಷಿಸಿದರೆ ಅದಕ್ಕೆ ಪ್ರತಿಯಾಗಿ ರಾಷ್ಟ್ರವನ್ನು ರಕ್ಷಿಸುವುದು ನಮ್ಮ ಕರ್ತವ್ಯವಾಗಿರುತ್ತದೆ.

ಒಟ್ಟಿನಲ್ಲಿ ಹಕ್ಕು ಮತ್ತು ಕರ್ತವ್ಯಗಳನ್ನು ಬೇರ್ಪಡಿಸಲು ಸಾಧ್ಯವಿಲ್ಲ. ಒಬ್ಬ ವ್ಯಕ್ತಿಯು ಕೇವಲ ಹಕ್ಕನ್ನು ಅನುಭವಿಸಿ ಕರ್ತವ್ಯವನ್ನು ಮರೆತರೆ ಹಕ್ಕುಗಳು ತಮ್ಮ ಪ್ರಾಮುಖ್ಯತೆಯನ್ನು ಕಳೆದುಕೊಳ್ಳುತ್ತವೆ. ವೈಯಕ್ತಿಕ ಸ್ವಾತಂತ್ರ್ಯ ಮತ್ತು ರಾಜ್ಯದ ಅಧಿಕಾರವನ್ನು ಸಮರಸಗೊಳಿಸುವ ಹಕ್ಕು ಮತ್ತು ಕರ್ತವ್ಯಗಳು ಸರ್ವರ ಸರ್ವತೋಮುಖ ಪ್ರಗತಿಗೆ ಪ್ರಯೋಜನಕಾರಿಯಾಗಿವೆ. ಇವುಗಳ ಸಂಬಂಧವನ್ನರಿತು ಕರ್ತವ್ಯ ನಿರ್ವಹಿಸುವ ಪ್ರಜ್ಞಾವಂತ ಪ್ರಜೆಗಳಿಂದ ಪ್ರಬುದ್ಧ ರಾಷ್ಟ್ರ ಮತ್ತು ಮನುಕುಲದ ನಿರ್ಮಾಣ ಸಾಧ್ಯವಾಗುತ್ತದೆ.

## ಅಭ್ಯಾಸ

**I. ಒಂದು ವಾಕ್ಯದಲ್ಲಿ ಉತ್ತರಿಸಿ:**

1. ರೈಟ್ ಪದದ ಮೂಲ ಪದ ಯಾವುದು?
2. ನೈತಿಕ ಹಕ್ಕುಗಳು ಎಂದರೇನು?
3. ಜೀವಿಸುವ ಹಕ್ಕು ಯಾವ ಹಕ್ಕಾಗಿದೆ?
4. ಕರ್ತವ್ಯ ಎಂದರೇನು?
5. ನೈತಿಕ ಕರ್ತವ್ಯ ಎಂದರೇನು?

**II**. ಕೆಳಗಿನ ವಾಕ್ಯಗಳಲ್ಲಿ ಖಾಲಿ ಬಿಟ್ಟಿರುವ ಜಾಗಗಳನ್ನು ಸೂಕ್ತ ಪದಗಳಿಂದ ತುಂಬಿರಿ.

1. ಹಕ್ಕುಗಳನ್ನು ಮುಖ್ಯವಾಗಿ _______ ಬಗೆಗಳಾಗಿ ವಿಂಗಡಿಸಬಹುದು.
2. ಉದ್ಯೋಗದ ಹಕ್ಕು _______ ಹಕ್ಕಿಗೆ ಉದಾಹರಣೆಯಾಗಿದೆ.
3. ತೆರಿಗೆ ಪಾವತಿ ಮಾಡುವುದು _______ ಕರ್ತವ್ಯವಾಗಿದೆ.
4. ಕುಟುಂಬದ ಹಕ್ಕು _______ ಹಕ್ಕುಗಳ ಪಟ್ಟಿಗೆ ಸೇರುತ್ತದೆ.
5. ಚುನಾವಣೆಯಲ್ಲಿ ಸ್ಪರ್ಧಿಸುವ ಹಕ್ಕು _______ ಹಕ್ಕಾಗಿದೆ.

**III.** ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ:

1. ಕರ್ತವ್ಯ ಎಂಬ ಪದದ ಉತ್ಪತ್ತಿ ತಿಳಿಸಿ?
2. ಶಾಸನಬದ್ಧ ಹಕ್ಕುಗಳು ಎಂದರೇನು? ಉದಾಹರಣೆ ಕೊಡಿ.
3. ಯಾವುದಾದರು ಎರಡು ಶಾಸನಬದ್ಧ ಕರ್ತವ್ಯಗಳನ್ನು ಹೆಸರಿಸಿ?
4. ನೈತಿಕ ಕರ್ತವ್ಯ ಎಂದರೇನು? ಒಂದು ಉದಾಹರಣೆ ಕೊಡಿ.
5. ನೀವು ನಿಮ್ಮ ಶಾಲೆಯಲ್ಲಿ ಪಾಲಿಸುವ ಎರಡು ಕರ್ತವ್ಯಗಳನ್ನು ತಿಳಿಸಿ.

**IV.** ನಾಲ್ಕು ಅಥವಾ ಐದು ವಾಕ್ಯಗಳಲ್ಲಿ ಉತ್ತರಿಸಿ:

1. ಹಕ್ಕುಗಳ ಸ್ವರೂಪವನ್ನು ವಿವರಿಸಿ.
2. ಕರ್ತವ್ಯದ ಮಹತ್ವವನ್ನು ತಿಳಿಸಿರಿ.
3. ರಾಜಕೀಯ ಹಕ್ಕು ಎಂದರೇನು? ಉದಾಹರಣೆ ಕೊಡಿ.

**V.** ಈ ಕೆಳಗಿನ ಪ್ರಶ್ನೆಗಳಿಗೆ ಎಂಟು ಅಥವಾ ಹತ್ತು ವಾಕ್ಯಗಳಲ್ಲಿ ಉತ್ತರಿಸಿ.

1. ಹಕ್ಕುಗಳ ಮಹತ್ವವನ್ನು ಸಂಕ್ಷಿಪ್ತವಾಗಿ ವಿವರಿಸಿ.
2. 'ಹಕ್ಕು ಮತ್ತು ಕರ್ತವ್ಯ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ', ಸಮರ್ಥಿಸಿ.

3. ಶಾಸನಬದ್ಧ ಕರ್ತವ್ಯಗಳನ್ನು ಸಂಕ್ಷಿಪ್ತವಾಗಿ ವಿವರಿಸಿ.

ಸಲಹಾತ್ಮಕ ಚಟುವಟಿಕೆಗಳು:

1. ಭಾರತ ಸಂವಿಧಾನದಲ್ಲಿ ನಮೂದಿಸಲಾದ ಮೂಲಭೂತ ಹಕ್ಕು ಮತ್ತು ಕರ್ತವ್ಯಗಳನ್ನು ಪಟ್ಟಿ ಮಾಡಿ.
2. 'ಹಕ್ಕು ಮತ್ತು ಕರ್ತವ್ಯಗಳು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ' ಈ ಹೇಳಿಕೆಯನ್ನು ಕುರಿತು ಒಂದು ಪ್ರಬಂಧವನ್ನು ರಚಿಸಿ.

## ಅಧ್ಯಾಯ- 9 ಸಂವಿಧಾನ (Constitution)

**ಕಲಿಕಾ ಉದ್ದೇಶಗಳು:**

1. ಸಂವಿಧಾನದ ಅರ್ಥ ಮತ್ತು ವ್ಯಾಖ್ಯೆಯನ್ನು ಅರ್ಥೈಸಿಕೊಳ್ಳುವುದು.
2. ಸಂವಿಧಾನದ ಮಹತ್ವವನ್ನು ತಿಳಿಯುವುದು.
3. ಸಂವಿಧಾನದ ವರ್ಗೀಕರಣವನ್ನು ಅರಿಯುವುದು.
4. ಲಿಖಿತ ಮತ್ತು ಅಲಿಖಿತ ಸಂವಿಧಾನಗಳ ವ್ಯತ್ಯಾಸ ಗುರುತಿಸುವುದು.

"ಸಂವಿಧಾನವು ರಾಜ್ಯದ ಕಾನೂನು ಮತ್ತು ರೂಢಿಗಳ ಸಂಕಲನವಾಗಿದ್ದು,
ಅವುಗಳ ಅನ್ವಯ ರಾಜ್ಯದ ಜೀವನ ಮುಂದುವರೆಯುತ್ತದೆ". - **ಲಾರ್ಡ್ ಬ್ರೈಸ್.**

### ಪೀಠಿಕೆ:

ಒಂದು ರಾಷ್ಟ್ರದ ಕಾನೂನಿನ ಭದ್ರ ಬುನಾದಿ ಆ ದೇಶದ ಸಂವಿಧಾನ. ಜೆಲಿನಿಕ್‌ರವರ ಪ್ರಕಾರ "ಸಂವಿಧಾನವಿಲ್ಲದ ರಾಜ್ಯವು ರಾಜ್ಯವಾಗಿರದೇ ಅರಾಜಕತೆಯ ತಾಣವಾಗಿರುತ್ತದೆ". ರಾಜ್ಯದ ಉದ್ದೇಶವನ್ನು ಸೂಕ್ತ ರೀತಿಯಲ್ಲಿ ಸಾಧಿಸಬೇಕಾದರೆ ಸಂವಿಧಾನದ ಅವಶ್ಯಕತೆ ಇದೆ.

ಪ್ರಾಚೀನ ಗ್ರೀಕ್‌ನ ನಗರ ರಾಜ್ಯಗಳಲ್ಲಿಯೇ ಸಂವಿಧಾನಗಳು ಅಸ್ತಿತ್ವದಲ್ಲಿದ್ದವು. ಆದರೆ ಕ್ರಿ. ಶ. 16 ನೇ ಶತಮಾನದಲ್ಲಿದ್ದ 2 ನೇ ಹೆನ್ರಿ ಸಂವಿಧಾನ ಎಂಬ ಪದವನ್ನು ಬಳಸಿದರು. ಅನಂತರ ಅಧಿಕೃತವಾಗಿ ಲಿಖಿತ ಸಂವಿಧಾನವನ್ನು 1789 ರಲ್ಲಿ ಅಮೇರಿಕಾದಲ್ಲಿ ಗುರುತಿಸುತ್ತೇವೆ.

### 9.1 ಸಂವಿಧಾನದ ಅರ್ಥ:

ಸಂವಿಧಾನದ ಶಬ್ದಾರ್ಥವು ಕುತೂಹಲಕಾರಿಯಾಗಿದೆ. ಸಂವಿಧಾನ ಎಂಬ ಪದವು ಆಂಗ್ಲ ಭಾಷೆಯ Constitution ಎಂಬ ಪದದ ಕನ್ನಡ ರೂಪಾಂತರವಾಗಿದೆ. Constitution ಎಂಬ ಪದ Constitute ಎಂಬ ಗ್ರೀಕ್ ಭಾಷೆಯಿಂದ ಬಂದಿದೆ. Constitute ಪದವು ಯೋಜಿಸು, ನಿಯೋಜಿಸು, ಸಂಯೋಜಿಸು ಎಂಬ ಅರ್ಥವನ್ನು ನೀಡುತ್ತದೆ. ಅದರಂತೆ ಅ Constitution ಪದಕ್ಕೆ ಆಂಗ್ಲ ಭಾಷೆಯಲ್ಲಿ physic ಎಂಬ ಸಮಾನಾರ್ಥಕ ಪದವು ಇದೆ. physic ಎಂದರೆ ಇಲ್ಲಿ ದೇಹದ ರಚನೆ ಎಂಬ ಅರ್ಥವನ್ನು ನೀಡುತ್ತದೆ. ಕಾನೂನುಗಳ ಸಂಕಲನವಾಗಿರುವ ಸಂವಿಧಾನವು ಕೂಡ ರಾಜ್ಯದ ವಿವಿಧ ಅಂಗಗಳಿರುವ ದೇಹವಿದ್ದಂತೆ".

### 9.2 ವ್ಯಾಖ್ಯೆಗಳು:

**ಅರಿಸ್ಟಾಟಲ್ ರವರ ಪ್ರಕಾರ:** "ರಾಜ್ಯದ ಆಡಳಿತ, ಅಧಿಕಾರ ಮತ್ತು ಪರಮಾಧಿಕಾರವನ್ನು ವ್ಯವಸ್ಥೆಗೊಳಿಸುವ ಮೂಲಭೂತ ಶಾಸನವೇ ಸಂವಿಧಾನ."

**ಹರ್ಮನ್ ಫೈನರ್ ರವರ ಪ್ರಕಾರ:** "ಮೂಲಭೂತ ರಾಜಕೀಯ ಸಂಸ್ಥೆಗಳ ವ್ಯವಸ್ಥೆ ಹಾಗೂ ಅಧಿಕಾರ ಬಾಂಧವ್ಯದ ಆತ್ಮಕಥನವೇ ಸಂವಿಧಾನ".

**ಜಾನ್‌ಲಾಕ್ ರವರ ಪ್ರಕಾರ:** "ಸರ್ಕಾರದ ರಚನೆಯೇ ಸಂವಿಧಾನ".

**ಗೆಟಲೆ ರವರ ಪ್ರಕಾರ:** "ಸರ್ಕಾರದ ರಚನೆಯನ್ನು ನಿರ್ಧರಿಸುವ ಮೂಲತತ್ವಗಳೇ ಸಂವಿಧಾನ".

**ಕೆ. ಸಿ. ವೀರ್ ರವರ ಪ್ರಕಾರ:** "ಒಂದು ರಾಷ್ಟ್ರದ ಸರ್ಕಾರದ ಆಡಳಿತವನ್ನು ನಡೆಸಲು ಅಗತ್ಯವಾದ ಕಾನೂನುಬದ್ಧ ನಿಯಮಗಳ ಸಂಕಲನವೇ ಸಂವಿಧಾನ."

## 9.3 ಸಂವಿಧಾನದ ಮಹತ್ವ:

ಸಂವಿಧಾನವು ಸರ್ವಕಾಲಿಕ ಪ್ರಾಮುಖ್ಯತೆಯನ್ನು ಪಡೆದಿದೆ. ಸಂವಿಧಾನವು ಆ ರಾಜ್ಯದ ಆಡಳಿತವನ್ನು ನಿರ್ದೇಶಿಸುವ ದಿಕ್ಸೂಚಿಯಿದ್ದಂತೆ. ವಿಶ್ವದ ಬಹುತೇಕ ರಾಷ್ಟ್ರಗಳು ಸಂವಿಧಾನವನ್ನು ಹೊಂದಿವೆ. ಸಂವಿಧಾನವು ರಾಜಕೀಯ ಅಧುನಿಕತೆಯ ಲಕ್ಷಣವೂ ಆಗಿದ್ದು, ಈ ಕೆಳಕಂಡ ಮಹತ್ವವನ್ನು ಹೊಂದಿದೆ.

1. **ಮೂಲಭೂತ ಕಾನೂನು:**

   ಸಂವಿಧಾನವು ಆಯಾ ರಾಷ್ಟ್ರದ ಮೂಲಭೂತ ಕಾನೂನು. ಸಂವಿಧಾನವಿಲ್ಲದೆ ಯಾವ ವಿಧವಾದ ಕಾನೂನುಗಳು ಅಸ್ತಿತ್ವದಲ್ಲಿರಲು ಸಾಧ್ಯವಿಲ್ಲ. ಸರ್ಕಾರದ ವಿವಿಧ ಅಂಗಗಳು ಸಂವಿಧಾನದ ಮಾರ್ಗದರ್ಶನದಲ್ಲಿಯೇ ತಮ್ಮ ಅಧಿಕಾರ ಮತ್ತು ಕರ್ತವ್ಯಗಳನ್ನು ನಿರ್ವಹಿಸುತ್ತವೆ.

2. ಸರ್ಕಾರದ ನಿಯಮಬದ್ಧತೆ:

   ಸರ್ಕಾರವು ನಿಯಮಬದ್ಧವಾಗಿ ನಡೆಯಲು ಹಾಗೂ ಆಳುವ ವರ್ಗದ ಸರ್ವಾಧಿಕಾರಿ ಪ್ರವೃತಿಯನ್ನು ತಡೆಗಟ್ಟಲು ಅವಶ್ಯಕವಾಗಿವೆ.

3. **ಹಕ್ಕು ಮತ್ತು ಕರ್ತವ್ಯ:**

   ಸಂವಿಧಾನವು ಪ್ರಜೆಗಳಿಗೆ ಮೂಲಭೂತ ಹಕ್ಕುಗಳನ್ನು ನೀಡುವುದಲ್ಲದೆ ಅವುಗಳಿಗೆ ರಕ್ಷಣೆಯನ್ನು ಒದಗಿಸುತ್ತದೆ. ಈ ಮೂಲಕ ಸಂವಿಧಾನವು ರಾಜ್ಯ, ಸರ್ಕಾರ ಅಥವಾ ಯಾವುದೇ ವ್ಯಕ್ತಿ, ಪ್ರಜೆಗಳ ಮೂಲಭೂತ ಹಕ್ಕುಗಳನ್ನು ಉಲ್ಲಂಘಿಸಿದಂತೆ ಪ್ರತಿಬಂಧಿಸುತ್ತದೆ. ಸಂವಿಧಾನವು ಮೂಲಭೂತ ಕರ್ತವ್ಯಗಳ ಪಟ್ಟಿಯನ್ನು ಒಳಗೊಂಡಿರುತ್ತದೆ. ಮೂಲಭೂತ ಕರ್ತವ್ಯಗಳ ಪಾಲನೆಯು ಪ್ರಜೆಗಳಲ್ಲಿ ರಾಷ್ಟ್ರೀಯ ಭಾವೈಕ್ಯತೆ, ದೇಶಭಕ್ತಿ, ರಾಷ್ಟ್ರ ನಿಷ್ಠೆ, ಕಾಯಕ ತತ್ವದಲ್ಲಿ ನಂಬಿಕೆ ಮತ್ತು ವೈಜ್ಞಾನಿಕ ಮನೋಭಾವವನ್ನು ಮೂಡಿಸುತ್ತದೆ.

4. ರಾಷ್ಟ್ರದ ಸ್ಥಿರತೆ ಮತ್ತು ಭದ್ರತೆ:

   ಸಂವಿಧಾನವು ರಾಷ್ಟ್ರದ ಸ್ಥಿರತೆ ಮತ್ತು ಭದ್ರತೆಯನ್ನು ಕಾಪಾಡುತ್ತದೆ. ಸಂವಿಧಾನವು ನಿಯಮಬದ್ಧವಾದ ಸರ್ಕಾರವನ್ನು ಒದಗಿಸುವುದರಿಂದ ಸ್ಥಿರವಾದ ರಾಷ್ಟ್ರ ನಿರ್ಮಾಣಕ್ಕೆ ಭದ್ರತೆಯನ್ನು ಒದಗಿಸುತ್ತದೆ.

5. ಅಧಿಕಾರದ ಹಂಚಿಕೆ:

   ಸಂವಿಧಾನವು ಸರ್ಕಾರದ ಅಂಗಗಳಾದ ಶಾಸಕಾಂಗ, ಕಾರ್ಯಾಂಗ ಹಾಗೂ ನ್ಯಾಯಾಂಗದ ರಚನೆ, ಅಧಿಕಾರ ಹಾಗೂ ವ್ಯಾಪ್ತಿಯನ್ನು ನಿರ್ಧರಿಸುತ್ತದೆ.

6. ಜನರ ವರ್ತನೆಯನ್ನು ನಿಯಂತ್ರಿಸುತ್ತದೆ:

   ಸಂವಿಧಾನ ರಾಷ್ಟ್ರದ ಜನರ ಬಾಹ್ಯವರ್ತನೆಯನ್ನು ನಿಯಂತ್ರಿಸಿ ಕಾನೂನುಬದ್ಧವಾಗಿ ವರ್ತಿಸಲು ಪ್ರೇರೇಪಿಸುತ್ತದೆ.

7. ವಿಶ್ವಶಾಂತಿ ಸಹಕಾರಿ:

   ಸಂವಿಧಾನವು ವಿಶ್ವಶಾಂತಿ ಸ್ಥಾಪನೆಗೆ ಸಹಕಾರಿಯಾಗಿದೆ. ಸಂವಿಧಾನವು ಪ್ರಜಾಪ್ರಭುತ್ವದ ಮೌಲ್ಯಗಳಾದ ಸ್ವಾತಂತ್ರ್ಯ, ಸಮಾನತೆ ಹಾಗೂ ಭ್ರಾತೃತ್ವಗಳನ್ನು ಎತ್ತಿ ಹಿಡಿಯುವುದರಿಂದ ವಿಶ್ವಶಾಂತಿಗೆ ಸಹಕಾರಿಯಾಗಿದೆ.

   ಒಟ್ಟಿನಲ್ಲಿ ಹೇಳುವುದಾದರೆ ವಿಶ್ವದ ಸಮಕಾಲೀನ ರಾಷ್ಟ್ರಗಳಲ್ಲಿ ಅರಾಜಕತೆಯನ್ನು ತಡೆದು ವಿಶ್ವಶಾಂತಿ, ಸಮೃದ್ಧತೆ ಮತ್ತು ಭದ್ರತೆಯೊಂದಿಗೆ ಜನತೆಯ ಸರ್ವಾಂಗೀಣ ಅಭಿವೃದ್ಧಿಗೆ ಸಂವಿಧಾನವೇ ಸಂಜೀವಿನಿ.

## 9.4 ಸಂವಿಧಾನದ ವರ್ಗೀಕರಣ:

ಸಂವಿಧಾನದ ಸ್ವರೂಪಕ್ಕೆ ಅನುಗುಣವಾಗಿ ಈ ಕೆಳಗಿನಂತೆ ವರ್ಗೀಕರಿಸಬಹುದು.

1. ಸಂವಿಧಾನ
   a. ಲಿಖಿತ ಸಂವಿಧಾನ
   b. ಅಲಿಖಿತ ಸಂವಿಧಾನ
   c. ನಮ್ಯ ಸಂವಿಧಾನ
   d. ಅನಮ್ಯ ಸಂವಿಧಾನ

### *a. ಲಿಖಿತ ಸಂವಿಧಾನ:*

ಬರವಣಿಗೆಯ ರೂಪದಲ್ಲಿರುವ ಸಂವಿಧಾನವೇ ಲಿಖಿತ ಸಂವಿಧಾನ. ಸಂವಿಧಾನ ರಚನಾ ಸಮಿತಿಯಿಂದ ತಜ್ಞರ ಮೂಲಕ ಪ್ರಜ್ಞಾಪೂರ್ವಕವಾಗಿ ರಚಿಸಲ್ಪಟ್ಟ ಸಂವಿಧಾನವೇ ಲಿಖಿತ

ಸಂವಿಧಾನ. ಇಲ್ಲಿ ಬಹುಭಾಗಗಳು ಲಿಖಿತ ರೂಪದಲ್ಲಿರುತ್ತವೆ. ಬಹುತೇಕ ರಾಷ್ಟ್ರಗಳು ಲಿಖಿತ ಸಂವಿಧಾನವನ್ನು ಅಳವಡಿಸಿಕೊಂಡಿವೆ. ಲಿಖಿತ ಸಂವಿಧಾನವನ್ನು ರಾಷ್ಟ್ರದ ಮೂಲಭೂತ ಶಾಸನ ಎಂದು ಪರಿಗಣಿಸಲಾಗಿದೆ. ಉದಾಹರಣೆಗೆ ಭಾರತ, ಅಮೇರಿಕಾ.

### *b. ಅಲಿಖಿತ ಸಂವಿಧಾನ:*

ಬರವಣಿಗೆ ರೂಪದಲ್ಲಿ ಇಲ್ಲದಿರುವ ಸಂವಿಧಾನವೇ ಅಲಿಖಿತ ಸಂವಿಧಾನ. ಸರ್ಕಾರದ ರಚನೆ, ಆಡಳಿತ ವಿಧಾನ ಹಕ್ಕು ಮತ್ತು ಕರ್ತವ್ಯಗಳ ಬಾಧ್ಯತೆಗಳು ರೂಢಿ ಸಂಪ್ರದಾಯಗಳ ಮೂಲಕ ರೂಪಿಸಿ ನಡೆಯಲ್ಪಟ್ಟಿರುವ ನಿಯಮಗಳೇ ಅಲಿಖಿತ ಸಂವಿಧಾನ.

ಇಂಗ್ಲೆಂಡ್ ಸಂವಿಧಾನ ಅಲಿಖಿತ ಸಂವಿಧಾನಕ್ಕೆ ಉತ್ಕೃಷ್ಟ ಉದಾಹರಣೆಯಾಗಿದೆ. ಅಲಿಖಿತ ಸಂವಿಧಾನ ಹೊಂದಿರುವ ಇಂಗ್ಲೆಂಡಿನಲ್ಲಿಯೂ ಸಹ ಕೆಲವು ಲಿಖಿತ ಅಂಶಗಳನ್ನು ಕಾಣಬಹುದು. 1215 ರ ಮ್ಯಾಗ್ನಕಾರ್ಟದಂತಹ ಕೆಲವು ನಿಯಮಗಳು ಲಿಖಿತ ರೂಪದಲ್ಲಿವೆ. ಇದರಿಂದಾಗಿ ಇಂಗ್ಲೆಂಡ್ ಸಂವಿಧಾನವನ್ನು 'ಆಕಸ್ಮಿಕಗಳ ಶಿಶು' ಎಂದೂ ಕರೆಯುತ್ತಾರೆ.

### *c. ಅನಮ್ಯ ಸಂವಿಧಾನ:*

ಯಾವ ಸಂವಿಧಾನವನ್ನು ವಿಶೇಷ ಮತ್ತು ಕಠಿಣ ವಿಧಾನದಿಂದ ತಿದ್ದುಪಡಿ ಮಾಡಲಾಗುತ್ತದೆಯೋ ಆ ಸಂವಿಧಾನವೇ ಅನಮ್ಯ ಸಂವಿಧಾನ. ಸಂವಿಧಾನಾತ್ಮಕ ಕಾನೂನಿಗೂ ಮತ್ತು ಸಾಮಾನ್ಯ ಕಾನೂನಿಗೂ ಇಲ್ಲಿ ವ್ಯತ್ಯಾಸವಿರುತ್ತದೆ. ಸಂವಿಧಾನ ರಚನಾ ಸಮಿತಿ ಅಥವಾ ಸಂವಿಧಾನಾತ್ಮಕ ಸಮ್ಮೇಳನದಿಂದ ಅನಮ್ಯ ಸಂವಿಧಾನ ರಚಿಸಲ್ಪಟ್ಟಿರುತ್ತದೆ. ಅಮೇರಿಕಾ, ರಷಿಯ, ಸ್ವಿಟ್ಜರ್ಲೆಂಡ್ ಸಂವಿಧಾನ ಅನಮ್ಯ ಸಂವಿಧಾನಕ್ಕೆ ಉತ್ತಮ ಉದಾಹರಣೆಗಳಾಗಿವೆ. ಈ ಸಂವಿಧಾನಗಳನ್ನು ಕಠಿಣ ಸಂವಿಧಾನ ಎಂದು ಕರೆಯಲಾಗಿದೆ.

### *d. ನಮ್ಯ ಸಂವಿಧಾನ:*

ಯಾವ ಸಂವಿಧಾನವನ್ನು ಸುಲಭವಾಗಿ ತಿದ್ದುಪಡಿ ಮಾಡಬಹುದೋ ಆ ಸಂವಿಧಾನವೇ ನಮ್ಯ ಸಂವಿಧಾನ. ಇಲ್ಲಿ ಸಂವಿಧಾನಾತ್ಮಕ ಕಾನೂನಿಗೂ ಸಾಮಾನ್ಯ ಕಾನೂನಿಗೂ ಯಾವುದೇ ವ್ಯತ್ಯಾಸವಿರುವುದಿಲ್ಲ. ಈ ಎರಡು ರೀತಿಯ ಕಾನೂನುಗಳನ್ನು ಶಾಸಕಾಂಗ ಸಾಮಾನ್ಯ ಶಾಸನ ರಚನಾ ವಿಧಾನದಂತೆಯೇ ರಚಿಸುತ್ತದೆ. ಇಂಗ್ಲೆಂಡಿನ ಸಂವಿಧಾನವು ನಮ್ಯ ಸಂವಿಧಾನಕ್ಕೆ ಉತ್ತಮ ಉದಾಹರಣೆಯಾಗಿದೆ.

ಒಟ್ಟಾರೆ ರಾಷ್ಟ್ರ ರಾಜ್ಯದ ಉದಯದೊಂದಿಗೆ ಸಂವಿಧಾನವು ಮೂಲಭೂತ ಕಾನೂನಾಗಿ ಪ್ರಮುಖವೆನಿಸಿದೆ. ಒಂದು ವ್ಯಕ್ತಿ ಮತ್ತು ರಾಷ್ಟ್ರದ ಪ್ರಗತಿ ಸ್ವಾತಂತ್ರ್ಯ, ಸಮಾನತೆ, ಹಕ್ಕು ಮತ್ತು ಕರ್ತವ್ಯಗಳಿಗೆ ಭದ್ರನೆಲೆಯನ್ನು ಸಂವಿಧಾನ ಕಲ್ಪಿಸಿಕೊಡುತ್ತದೆ.

## ಅಭ್ಯಾಸ

**I**. ಒಂದು ವಾಕ್ಯದಲ್ಲಿ ಉತ್ತರಿಸಿ:

1. ಸಂವಿಧಾನ ಎಂಬ ಪದ ಯಾವ ಭಾಷೆಯಿಂದ ಬಂದಿದೆ?
2. ಸಂವಿಧಾನ ಎಂದರೇನು?
3. ಸಂವಿಧಾನದ ಬಗ್ಗೆ ಒಂದು ವ್ಯಾಖ್ಯೆ ನೀಡಿ.
4. ಲಿಖಿತ ಸಂವಿಧಾನ ಎಂದರೇನು?
5. ಅಲಿಖಿತ ಸಂವಿಧಾನ ಎಂದರೇನು?

**II.** ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ:

1. ಸಂವಿಧಾನದ ಬಗ್ಗೆ ರಾಜಕೀಯ ಚಿಂತಕರುಗಳು ನೀಡಿರುವ ಎರಡು ವ್ಯಾಖ್ಯೆಗಳನ್ನು ತಿಳಿಸಿ.
2. ಲಿಖಿತ ಸಂವಿಧಾನದ ಲಕ್ಷಣಗಳನ್ನು ತಿಳಿಸಿ.
3. ನಮ್ಯ ಹಾಗೂ ಅನಮ್ಯ ಸಂವಿಧಾನದ ವ್ಯತ್ಯಾಸಗಳನ್ನು ಬರೆಯಿರಿ.
4. ಲಿಖಿತ ಮತ್ತು ಅಲಿಖಿತ ಸಂವಿಧಾನಗಳ ನಡುವಿನ ಎರಡು ವ್ಯತ್ಯಾಸಗಳನ್ನು ತಿಳಿಸಿ.

**III.** ನಾಲ್ಕು ಅಥವಾ ಐದು ವಾಕ್ಯಗಳಲ್ಲಿ ಉತ್ತರಿಸಿ:

1. ಸಂವಿಧಾನದ ಮಹತ್ವವನ್ನು ವಿವರಿಸಿ.
2. ಸಂವಿಧಾನದ ವರ್ಗೀಕರಣವನ್ನು ಬರೆಯಿರಿ?

**ಸಲಹಾತ್ಮಕ ಚಟುವಟಿಕೆ:**

1. ನಿಮ್ಮ ಶಾಲೆಯಲ್ಲಿ ವಿವಿಧ ಸಮಿತಿಗಳನ್ನು ನೇಮಿಸಿ ಶಿಸ್ತು ಪಾಲನೆಗೆ ಬೇಕಾದ ನಿಯಮಗಳನ್ನು ರಚಿಸಿ.

## ಅಧ್ಯಾಯ- 10 ನಾಗರಿಕ ಸೇವಾ ವರ್ಗ (Civil Service)

**ಕಲಿಕಾ ಉದ್ದೇಶಗಳು:**

1. ನಾಗರಿಕ ಸೇವಾ ವರ್ಗದ ಅರ್ಥವನ್ನು ಅರಿತುಕೊಳ್ಳುವುದು.
2. ನಾಗರಿಕ ಸೇವಾ ವರ್ಗದ ಲಕ್ಷಣಗಳನ್ನು ತಿಳಿದುಕೊಳ್ಳುವುದು.
3. ನಾಗರಿಕ ಸೇವಾ ವರ್ಗದ ಪ್ರಾಮುಖ್ಯತೆಯನ್ನು ಮೆಚ್ಚಿಕೊಳ್ಳುವುದು.
4. ನೇಮಕಾತಿಯ ಅರ್ಥ ಮತ್ತು ಪ್ರಾಮುಖ್ಯತೆಯನ್ನು ತಿಳಿಯುವುದು.

"ಆಡಳಿತವು ಆಧುನಿಕ ನಾಗರಿಕತೆಯ ವಿಜ್ಞಾನವಾಗಿದೆ." **ಚಾರ್ಲ್ಸ್ ಎ. ಬಿಯಾರ್ಡ್ಸ್**

### ಪೀಠಿಕೆ:

ರಾಜ್ಯಶಾಸ್ತ್ರವು ರಾಜ್ಯ ಮತ್ತು ಸರಕಾರದ ಅಧ್ಯಯನ ಮತ್ತು ಕಲೆಯಾಗಿದೆ ಎಂಬುದನ್ನು ಈಗಾಗಲೇ ತಿಳಿದುಕೊಂಡಿದ್ದೇವೆ. ಸರಕಾರದ ಆಡಳಿತವನ್ನು ಅಭ್ಯಾಸ ಮಾಡುವ ಶಾಸ್ತ್ರವೇ ಸಾರ್ವಜನಿಕ ಆಡಳಿತವಾಗಿರುತ್ತದೆ. ಇದು ರಾಜ್ಯಶಾಸ್ತ್ರದ ಉಪಶಾಖೆಯಾಗಿದೆ. ರಾಜ್ಯ ಮತ್ತು ಸರಕಾರವನ್ನು ಅಧ್ಯಯನ ಮಾಡುವ ರಾಜ್ಯಶಾಸ್ತ್ರವು ರಾಜ್ಯದ ವ್ಯವಸ್ಥಿತ ಸಂಘಟನೆ ಮತ್ತು ಆಡಳಿತವನ್ನು ಕಡೆಗಣಿಸುವುದಿಲ್ಲ. ಸರಕಾರದ ಮೂರು ಅಂಗಗಳಾದ ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗದಿಂದ ನಿರ್ವಹಿಸಲ್ಪಡುತ್ತದೆ. ಎರಡನೇ ಅಂಗವಾದ ಕಾರ್ಯಾಂಗಕ್ಕೆ 2 ಮುಖಗಳಿವೆ. ಒಂದನ್ನು ರಾಜಕೀಯ ಕಾರ್ಯಾಂಗವೆಂದು ಕರೆದರೆ ಮತ್ತೊಂದನ್ನು ಶಾಶ್ವತ ಕಾರ್ಯಾಂಗವೆಂದು ಕರೆಯಲಾಗಿದೆ. ಹಾಗೆ ಯೋಚಿಸಿದರೆ ಶಾಶ್ವತ ಕಾರ್ಯಾಂಗವೇ ಶಾಶ್ವತವಲ್ಲದ ರಾಜಕೀಯ ಕಾರ್ಯಾಂಗಕ್ಕೆ ಸದಾ ಸಹಾಯಕವಾಗಿ ಆಡಳಿತ ನಡೆಸಿಕೊಂಡು ಹೋಗುವ ಪ್ರಮುಖ ನಿರ್ವಹಣಾ ಅಂಗವಾಗಿದೆ. ದೇಶದ ಬಾಹ್ಯಭದ್ರತೆಯನ್ನು ಒದಗಿಸುವ ಸೈನಿಕ ಸೇವೆಗಿಂತಲೂ ಭಿನ್ನವಾದ ರೀತಿಯಲ್ಲಿ ನಾಗರಿಕರೆಲ್ಲರಿಗೂ ಸೇವೆ ನೀಡುವ ವಿಶೇಷ ಅಂಗವಾಗಿ ಬೆಳೆದು ಬಂದಿದೆ. ಖಾಯಂ, ವೇತನ ಪಡೆಯುವ ಹಾಗೂ ತಜ್ಞ ನೌಕರರ ವೃತ್ತಿನಿರತ ಅಂಗವೇ ನಾಗರಿಕ ಸೇವಾ ವರ್ಗವಾಗಿದೆ. ಇದು ಸರಕಾರದ 4 ನೇ ಅಂಗವೆಂದು ಕರೆಯಲ್ಪಟ್ಟಿದೆ. ಆದ್ದರಿಂದ ರಾಜ್ಯಶಾಸ್ತ್ರದ ಪ್ರಮುಖ ಪರಿಕಲ್ಪನೆಗಳಲ್ಲಿ ಒಂದಾಗಿದೆ.

### 10.1 ಅರ್ಥ ಮತ್ತು ವ್ಯಾಖ್ಯೆಗಳು:

ನಾಗರಿಕ ಸೇವಾವರ್ಗವು ನಾಗರಿಕ ಆಡಳಿತಕ್ಕೆ ಸಂಬಂಧಿಸಿದೆ. ಈ ಕುರಿತು ರಾಜ್ಯಶಾಸ್ತ್ರಜ್ಞರು ಈ ಕೆಳಕಂಡಂತೆ ವ್ಯಾಖ್ಯಾನಿಸಿದ್ದಾರೆ.

ಇ. ಎನ್. ಗ್ಲಾಡನ್ ರ ಪ್ರಕಾರ: ಯಾವುದೇ ಪಕ್ಷಪಾತವಿಲ್ಲದೆ, ವರ್ಗಪರವಲ್ಲರೆ, ಸ್ವಾರ್ಥತೆ ಇಲ್ಲದೆ ರಾಷ್ಟ್ರ ಸೇವೆಗೆ ಸಿದ್ಧವಿರುವ ಆಡಳಿತದಲ್ಲಿರುವ ತಟಸ್ಥ ತಜ್ಞರ ವೃತ್ತಿಪರ

ಅಂಗವೇ ನಾಗರಿಕ ಸೇವಾವರ್ಗವಾಗಿದೆ.

**ಆರ್. ಜಿ. ಗೆಟಲ್‌ರ ಪ್ರಕಾರ:** ಹಲವಾರು ಇಲಾಖೆಗಳಲ್ಲಿ ಸೇವೆ ಸಲ್ಲಿಸುವ ಅಧಿಕಾರಿಗಳ ಸಮೂಹವೇ ನಾಗರಿಕ ಸೇವಾವರ್ಗವಾಗಿದೆ.

**ಎಫ್. ಎ. ಓಗ್‌ರ ಪ್ರಕಾರ:** "ರಾಷ್ಟ್ರದ ಒಂದು ತುದಿಯಿಂದ ಮತ್ತೊಂದು ತುದಿಯವರೆಗೆ ಕಾನೂನು ಜಾರಿಗೆ ತರುವ ಪುರುಷ ಮತ್ತು ಮಹಿಳೆಯರ ಬೃಹತ್ ಸಮೂದಾಯವೇ ನಾಗರಿಕ ಸೇವಾವರ್ಗವಾಗಿದೆ".

**ಎಸ್. ಆರ್. ಮಹೇಶ್ವರಿ ಪ್ರಕಾರ:** ಸರಕಾರದ ನೀತಿ ಮತ್ತು ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ಪ್ರಕ್ರಿಯೆಯಲ್ಲಿ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಭಾಗವಹಿಸುವ ಎಲ್ಲಾ ಸರಕಾರಿ ನೌಕರರ ಸಮೂಹವೇ ನಾಗರಿಕ ಸೇವಾವರ್ಗವಾಗಿದೆ.

## 10.2 **ನಾಗರಿಕ** ಸೇವಾ ವರ್ಗದ ಲಕ್ಷಣಗಳು:

ರಾಜ್ಯಶಾಸ್ತ್ರ ಮತ್ತು ಸಾರ್ವಜನಿಕ ಆಡಳಿತದ ಕೇಂದ್ರ ಸ್ಥಾನದಲ್ಲಿರುವ ನಾಗರೀಕ ಸೇವಾವರ್ಗವೆಂಬ ಈ ವ್ಯವಹಾರಿಕ ಪರಿಕಲ್ಪನೆಗೆ ಅದರದೆಯಾದ ವಿಶಿಷ್ಟ ಲಕ್ಷಣಗಳಿವೆ. ಈ ಲಕ್ಷಣಗಳು ನಾಗರಿಕ ಸೇವಾ ವರ್ಗದ ಒಳಹೊರವುಗಳ ವ್ಯಾಪ್ತಿ ಮತ್ತು ಪ್ರಾಮುಖ್ಯತೆಯನ್ನು ಅರ್ಥೈಸಿಕೊಳ್ಳಲು ನೆರವಾಗುತ್ತವೆ.

ಇಂತಹ ಲಕ್ಷಣಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

**1)** ವೃತ್ತಿ ನಿರತ ವರ್ಗ (Professional):

ನಾಗರಿಕ ಸೇವಾವರ್ಗವು ತರಬೇತಿ ಪಡೆದ, ತಜ್ಞ ಖಾಯಂ, ಮತ್ತು ವೇತನ ಪಡೆಯುವ ವೃತ್ತಿ ನಿರತ ವರ್ಗವಾಗಿರುತ್ತದೆ. ಇವರು ನಾಗರಿಕ ಸೇವೆಯಲ್ಲಿ ನಿರತರಾಗಿ ಆಡಳಿತ ನಡೆಸುತ್ತಾರೆ.

**2)** ಶ್ರೇಣಿ ಪದ್ಧತಿ (Hierarchy):

ನಾಗರಿಕ ಸೇವಾ ವರ್ಗದ ಅಧಿಕಾರಿಗಳನ್ನು ವಿವಿಧ ಶ್ರೇಣಿಗಳಾಗಿ ವಿಂಗಡಿಸಿ ಒಂದು ನಿಯಮಿತದಡಿ ತರಲಾಗಿದೆ. ನಾಗರಿಕ ಸೇವಾವರ್ಗವು ಸೈನ್ಯದಂತೆ ಶ್ರೇಣಿ ಪದ್ಧತಿಯನ್ನು ಆಧರಿಸುತ್ತದೆ. ಉನ್ನತಾಧಿಕಾರಿಗಳು ಆಜ್ಞೆಗಳನ್ನು ನೀಡುತ್ತಾರೆ. ಅಧೀನ ಅಧಿಕಾರಿಗಳು ಆಜ್ಞೆಗಳನ್ನು ಸ್ವೀಕರಿಸಿ ಅನುಷ್ಠಾನಗೊಳಿಸುತ್ತಾರೆ.

**3) ರಾಜಕೀಯ ತಾಟಸ್ಥತೆ (Neutrality):**

ರಾಜಕೀಯ ವ್ಯವಹಾರಗಳಿಂದ ವಿರಚಿತಗೊಂಡಿರುತ್ತಾರೆ. ಇವರು ರಾಜ್ಯದ ಸೇವಕರಾಗಿದ್ದು, ಯಾವ ಪಕ್ಷ ಅಧಿಕಾರಕ್ಕೆ ಬರುತ್ತದೆಯೋ ಆ ಪಕ್ಷಕ್ಕೆ ಹೊಂದಿಕೊಳ್ಳಬೇಕು. ಅವರು ಪಕ್ಷದ ಅಥವಾ ವರ್ಗದ ಪರವಾಗಿ ಕಾರ್ಯನಿರ್ವಹಿಸಬಾರದು.

**4)** ಅನಾಮಧೇಯತೆ (Anonymity):

ಆಡಳಿತವು ಉತ್ತಮವಾಗಿದ್ದರೆ ಅದರ ಕೀರ್ತಿಯೂ ಸಂಬಂಧಪಟ್ಟ ಮಂತ್ರಿಗೆ ಸಲ್ಲುತ್ತದೆ. ಆಡಳಿತವು ಉತ್ತಮವಾಗಿಲ್ಲದಿದ್ದರೆ, ಅಪಕೀರ್ತಿಯೂ ಮಂತ್ರಿಗೆ ಸಲ್ಲುತ್ತದೆ. ನಾಗರಿಕ ಸೇವಾವರ್ಗವು ಸದಾ ತೆರೆಮರೆಯಲ್ಲಿಯೇ ರಾಜಕೀಯ ಕಾರ್ಯಾಂಗದ ಪರವಾಗಿ ಕಾರ್ಯನಿರ್ವಹಿಸುತ್ತದೆ.

**5)** ನಿಷ್ಪಕ್ಷಪಾತತೆ: (Impartiality)

ನಾಗರಿಕ ಸೇವಾ ವರ್ಗದ ನೌಕರರು ನಿಸ್ವಾರ್ಥವಾಗಿ ಸೇವೆ ಸಲ್ಲಿಸಬೇಕು. ಅವರು ಸಮಾಜದ ಯಾವುದೇ ವ್ಯಕ್ತಿಯ ಅಥವಾ ವರ್ಗದ ಪರವಾಗಿ ಕಾರ್ಯನಿರ್ವಹಿಸದೆ ಕಾನೂನಿನ ಚೌಕಟ್ಟಿನಲ್ಲಿ ತಮ್ಮ ಕರ್ತವ್ಯ ನಿರ್ವಹಿಸಬೇಕು.

**6)** ಸೇವಾ ಮನೋಭಾವ: (Service Attitude)

ನಾಗರಿಕ ಸೇವಾವರ್ಗವು ಯಾವುದೇ ರಾಗ ದ್ವೇಷಗಳಿಗೆ ಒಳಗಾಗದೆ ಸಾರ್ವಜನಿಕರಿಗೆ ಸೇವೆ ಸಲ್ಲಿಸುತ್ತದೆ. ಇವರು ಜನರ ಕಲ್ಯಾಣಕ್ಕಾಗಿ ಸದಾ ಸೇವೆ ಸಲ್ಲಿಸುತ್ತಾರೆ.

**7)** ಸಾರ್ವಜನಿಕ ಜವಾಬ್ದಾರಿ: (Public Accountability)

ಇವರು ಜನತಾ ಪ್ರತಿನಿಧಿಗಳಿಗೆ ಜವಾಬ್ದಾರರಾಗಿ ಕಾರ್ಯನಿರ್ವಹಿಸುತ್ತಾರೆ.

**8) ಖಾಯಂ ನೇಮಕಾತಿ: (Permanent Appointment)**

ನಾಗರಿಕ ಸೇವಾ ಸಿಬ್ಬಂದಿಯು ನೇಮಕವಾದ ದಿನದಿಂದ ನಿವೃತ್ತಿ ಹೊಂದುವ ದಿನದವರೆಗೂ ಖಾಯಂ ಆಗಿ ಸೇವೆ ಸಲ್ಲಿಸುವ ವರ್ಗವಾಗಿದೆ. ರಾಜಕೀಯ ಕಾರ್ಯಾಂಗವಾದ ಮಂತ್ರಿಗಳು ನಿಯತಕಾಲಿಕವಾಗಿ ಅಧಿಕಾರಕ್ಕೆ ಬರುತ್ತಾರೆ ಮತ್ತು ಹೋಗುತ್ತಾರೆ. ಆದರೆ ನಾಗರಿಕ ಸೇವಾ ಸಿಬ್ಬಂದಿಗಳು ನಿವೃತ್ತಿಯಾಗುವವರೆಗೂ ಸೇವೆ ಸಲ್ಲಿಸುತ್ತಾರೆ.

## ಅಶಾಶ್ವತ ಕಾರ್ಯಾಂಗ ಮತ್ತು ಶಾಶ್ವತ ಕಾರ್ಯಾಂಗಗಳ ನಡುವಿನ ವ್ಯತ್ಯಾಸ

ಮಂತ್ರಿಗಳನ್ನೊಳಗೊಂಡ ಅಶಾಶ್ವತ ಕಾರ್ಯಾಂಗ ಮತ್ತು ನಾಗರೀಕ ಸೇವಾ ಸಿಬ್ಬಂದಿಗಳನ್ನು ಒಳಗೊಂಡ ಶಾಶ್ವತ ಕಾರ್ಯಾಂಗದ ನಡುವೆ ನಿಕಟ ಸಂಬಂಧವಿದೆ. ಆದರೂ ಇವೆರಡರ ನಡುವೆ ವ್ಯತ್ಯಾಸವಿರುವುದು ಕಂಡುಬರುತ್ತದೆ. ಅವುಗಳನ್ನು ಕೆಳಕಂಡಂತೆ ಗುರುತಿಸಬಹುದು.

| **ಶಾಶ್ವತ ಕಾರ್ಯಾಂಗ** | **ಅಶಾಶ್ವತ ಕಾರ್ಯಾಂಗ** |
|---|---|
| 1) ಶಾಶ್ವತ ಕಾರ್ಯಾಂಗವು ಎಲ್ಲಾ ಸರ್ಕಾರಿ ನೌಕರರನ್ನು ಒಳಗೊಂಡಿರುತ್ತದೆ. | 1) ಅಶಾಶ್ವತ ಕಾರ್ಯಾಂಗವು ಮಂತ್ರಿಗಳನ್ನು ಒಳಗೊಂಡಿರುತ್ತದೆ. |
| 2) ಶಾಶ್ವತ ಕಾರ್ಯಾಂಗವು ನೀತಿ ನಿರೂಪಣೆ ಮತ್ತು ನೀತಿ ಅನುಷ್ಠಾನದಲ್ಲಿ ನೆರವು | 2) ಮಂತ್ರಿಗಳು ವಿವಿಧ ಇಲಾಖೆಯ ಮುಖ್ಯಸ್ಥರಾಗಿರುತ್ತಾರೆ. |

| ನೀಡುತ್ತದೆ. | |
|---|---|
| 3) ನಾಗರಿಕ ಸೇವಾ ವರ್ಗದ ಸದಸ್ಯರು ನೇಮಕಾತಿ ಪ್ರಾಧಿಕಾರದ ಮೂಲಕ ಅರ್ಹತೆಯ ಆಧಾರದ ಮೇಲೆ ಆಯ್ಕೆಯಾಗುತ್ತಾರೆ. | 3) ಮಂತ್ರಿಗಳು ನಿಯತಕಾಲಿಕಾ ಚುನಾವಣೆಗಳ ಮೂಲಕ ಜನರಿಂದ ಆಯ್ಕೆಯಾಗುತ್ತಾರೆ. |
| 4) ನಾಗರಿಕ ಸೇವಾ ವರ್ಗದಲ್ಲಿರುವ ನೌಕರರು ವ್ಯಾಪಕವಾದ ಆಡಳಿತಾತ್ಮಕ ಅನುಭವವನ್ನು ಹೊಂದಿರುತ್ತಾರೆ. | 4) ಅಶಾಶ್ವತ ಕಾರ್ಯಾಂಗದವರು ಸ್ವಲ್ಪ ಮಟ್ಟಿನ ಶಾಸನೀಯ ಮತ್ತು ಸರಕಾರಿ ಆಡಳಿತದ ಅನುಭವ ಹೊಂದಿರುತ್ತಾರೆ. |
| 5) ನಾಗರೀಕ ಸೇವಾ ವರ್ಗವು ತಾವು ಸೇವೆ ಸಲ್ಲಿಸುತ್ತಿರುವ ಇಲಾಖೆಗೆ ಹೊಣೆಗಾರರಾಗಿರುತ್ತಾರೆ. | 5) ಮಂತ್ರಿಗಳು ಶಾಸಕಾಂಗಕ್ಕೆ ಹೊಣೆಗಾರರಾಗಿರುತ್ತಾರೆ. |
| 6) ನಾಗರೀಕಾ ಸೇವಾ ವರ್ಗದ ನೌಕರರು ನೇಮಕಗೊಂಡ ದಿನದಿಂದ ನಿವೃತ್ತಿಯವರೆಗೂ ಅಧಿಕಾರದಲ್ಲಿರುತ್ತಾರೆ. ಆದ್ದರಿಂದ ನೌಕರರನ್ನೊಳಗೊಂಡ ಶಾಶ್ವತ ಕಾರ್ಯಾಂಗವೆಂದು ಕರೆಯಲಾಗಿದೆ. | 6) ಮಂತ್ರಿಗಳು ತಮ್ಮ ಸರ್ಕಾರ ಅಸ್ತಿತ್ವದಲ್ಲಿ ಇರುವವರೆಗೂ ಅಧಿಕಾರದಲ್ಲಿರುತ್ತಾರೆ. ಆದ್ದರಿಂದ ಮಂತ್ರಿಗಳನ್ನೊಳಗೊಂಡ ರಾಜಕೀಯ ಕಾರ್ಯಾಂಗವನ್ನು ಅಶಾಶ್ವತ ಕಾರ್ಯಾಂಗವೆಂದು ಕರೆಯಲಾಗಿದೆ. |

## 10.3 ನಾಗರಿಕ ಸೇವೆಯ ಮಹತ್ವ:

ನಾಗರೀಕ ಸೇವಾವರ್ಗದ ಕಾರ್ಯಪ್ರಭಾವವು ಜೀವಿಗಳೆಲ್ಲರ ಗರ್ಭದಿಂದ ಗೋರಿಯವರೆಗೆ ವಿಸ್ತರಿಸಿಕೊಂಡಿದೆ. ಮನುಕುಲದ ನಾಗರಿಕತೆ ಮತ್ತು ಸಂಸ್ಕೃತಿಯ ಏಳು, ಬೀಳು, ಉಳಿವು, ಅಳಿವುಗಳು ನಾಗರಿಕ ಸೇವಾವರ್ಗವನ್ನೇ ಅವಲಂಭಿಸಿವೆ. ಇಂತಹ ವೈಶಿಷ್ಟತೆ ಹೊಂದಿರುವ ನಾಗರಿಕ ಸೇವಾವರ್ಗದ ಪ್ರಾಮುಖ್ಯತೆಯನ್ನು ಈ ಕೆಳಕಂಡ ಅಂಶಗಳಿಂದ ತಿಳಿಯಬಹುದಾಗಿದೆ.

1) ರಾಜ್ಯಾಡಳಿತದ ಮೂಲಾಧಾರ:

ರಾಜ್ಯದ ಸಂಕೀರ್ಣವಾದ ಕಾರ್ಯ ಚಟುವಟಿಕೆಗಳನ್ನು ನಾಗರಿಕ ಸೇವಾ ವರ್ಗ ನಿರ್ವಹಿಸುತ್ತದೆ. ರಾಜಕೀಯ ಕಾರ್ಯಾಂಗವಾದ ಮಂತ್ರಿಗಳಿಗೆ ಸಹಾಯ, ಸಲಹೆ, ನೀಡುವ ಕಾರ್ಯವನ್ನು ಮಾಡುತ್ತದೆ. ಆದುದರಿಂದ ಸಾರ್ವಜನಿಕ ಸೇವಾ ವರ್ಗವೇ ರಾಜ್ಯಾಡಳಿತದ ಆಧಾರವಾಗಿದೆ.

2) ಆಡಳಿತ ಅಭಿವೃದ್ಧಿಯ ರೂವಾರಿ:

ದೇಶದಲ್ಲಿ ಆಡಳಿತ ಅಭಿವೃದ್ಧಿ ವಾಸ್ತವವಾಗಿ ನಾಗರೀಕ ಸೇವಾ ವರ್ಗವನ್ನು ಅವಲಂಬಿಸಿರುತ್ತದೆ. ಇದಕ್ಕೆ ಪೂರಕವಾಗಿ "ರಾಮೆ ಮ್ಯೂರ್" ರವರು ಸಂಸತ್ತು ಸಚಿವರ ಕೈಗೊಂಬೆಯಾದರೆ ಸಚಿವರು ನಾಗರಿಕ ಸೇವಾ ವರ್ಗದ ಕೈಗೊಂಬೆಯಾಗಿರುತ್ತಾರೆಂದು ತಿಳಿಸಿರುವುದು ಔಚಿತ್ಯ ಪೂರ್ಣವಾದುದಾಗಿದೆ.

3) ನಿಯೋಜಿತ ಶಾಸನ ಅಧಿಕಾರ:

ಶಾಸನಗಳನ್ನು ಸಂಕ್ಷಿಪ್ತರೂಪದಲ್ಲಿ ರಚಿಸುತ್ತಾರೆ. ಅದರ ವಿವರವಾದ ನಿಯಮಗಳನ್ನು ರಚಿಸುವ ಅಧಿಕಾರವನ್ನು ಕಾರ್ಯಾಂಗಕ್ಕೆ ನಿಯೋಜಿಸುತ್ತದೆ.

4) ಸಾರ್ವಜನಿಕ ಮತ್ತು ಕಾನೂನುಗಳ ಅನುಷ್ಠಾನ:

ರಾಜ್ಯದ ಇಚ್ಚೆಯನ್ನು ಪ್ರತಿನಿಧಿಸುವ ಕಾನೂನು, ನೀತಿ, ಕ್ರಮಗಳನ್ನು **ಅನುಷ್ಠಾನ**ಗೊಳಿಸಲು ಅತ್ಯಗತ್ಯವಾಗಿರುತ್ತದೆ.

5) ಕಲ್ಯಾಣ ರಾಜ್ಯಕ್ಕೆ ಉಪಯುಕ್ತಕಾರಿ:

ಆಧುನಿಕ ರಾಜ್ಯಗಳು ಕಾರ್ಯ ಸ್ವರೂಪದಲ್ಲಿ ಕಲ್ಯಾಣರಾಜ್ಯಗಳಾಗಿವೆ. ಜನಕಲ್ಯಾಣಕ್ಕಾಗಿ ಅನೇಕ ನೀತಿ ಯೋಜನೆಗಳನ್ನು ಮತ್ತು ಕಾರ್ಯಕ್ರಮಗಳನ್ನು ರೂಪಿಸಿ **ಅನುಷ್ಠಾ**ನಗೊಳಿಸುವ ಪರಮೋಚ್ಚ ಇಚ್ಚೆಯನ್ನು ಹೊಂದಿವೆ. ಜನಾಭಿವೃದ್ಧಿಯೇ ರಾಜ್ಯಭಿವೃದ್ಧಿಯ ಬುನಾದಿಯಾಗಿದೆ. ಕಲ್ಯಾಣ ರಾಜ್ಯದ ಕನಸನ್ನು ನನಸಾಗಿಸಲು ನಾಗರೀಕ ಸೇವಾ ವರ್ಗ ಹಗಲಿರುಳೆನ್ನದೆ ಶ್ರಮಿಸುತ್ತದೆ.

**6) ಕಾನೂನು ಸುವ್ಯವಸ್ಥೆ ಕಾಪಾಡುವುದು**:

ಕಾನೂನು ಸುವ್ಯವಸ್ಥಿತತೆಯನ್ನು ಕಾಪಾಡುವ ಮೂಲಕ ರಾಷ್ಟ್ರದ ಅಭಿವೃದ್ಧಿಗೆ ಅಡಿಪಾಯವನ್ನುಂಟು ಮಾಡುತ್ತದೆ.

ಶಾಸಕಾಂಗ, ಸಚಿವ ಸಂಪುಟ ಮತ್ತು ಅಧ್ಯಕ್ಷರು ರಾಜ್ಯವನ್ನಾಳಿದರೆ, ನೈಜ ಆಡಳಿತ ನಿರ್ವಹಣೆ ಆಡಳಿತಾಂಗದಿಂದ ನಡೆಯುತ್ತದೆ ಎಂದು ಹರ್ಮನ್ ಫೈನರ್ ತಿಳಿಸಿದ್ದಾರೆ. ಇದು ನಾಗರಿಕ ಸೇವಾವರ್ಗದ ಪಾತ್ರವನ್ನು ತಿಳಿಸುತ್ತದೆ.

ಒಟ್ಟಿನಲ್ಲಿ ದೇಶದ ಗತೀಶೀಲ ಇತಿಹಾಸ, ವರ್ತಮಾನ ಮತ್ತು ಭವಿಷ್ಯವು ನಾಗರಿಕ ಸೇವಾ ವರ್ಗವನ್ನು ಅವಲಂಬಿಸಿದೆ. ಇದರಿಂದಾಗಿ ಹರ್ಮನ್ ಫೈನರ್ರು ಆಡಳಿತದಲ್ಲಿ ನಾಗರಿಕ ಸೇವಾವರ್ಗವು ಸಾರ್ವಭೌಮ ಅಂಶವಾಗಿದೆ ಎಂದಿದ್ದಾರೆ. ಇದು ಸಮಾಜದ ಅಭಿವೃದ್ಧಿ ಮತ್ತು ಬೆಳವಣಿಗೆಯ ಅವಿಭಾಜ್ಯ ಅಂಗವಾಗಿದೆ.

## 10.4 ನೇಮಕಾತಿ ಸ್ಥಾನಭರ್ತಿ:

ನೇಮಕಾತಿಯು ನಾಗರಿಕ ಸೇವೆಯ ಪ್ರಥಮ ಹಂತವಾಗಿದೆ. ಸೂಕ್ತವಾದ ಸ್ಥಾನಕ್ಕೆ ಸೂಕ್ತವಾದ ವ್ಯಕ್ತಿಯನ್ನು ನೇಮಕ ಮಾಡುವುದೇ ನೇಮಕಾತಿಯಾಗಿರುತ್ತದೆ. ಉತ್ತಮ ನೇಮಕಾತಿಯು ಸದೃಢ ಸಾರ್ವಜನಿಕ ಸೇವೆಗೂ ಮತ್ತು ಸಂಪೂರ್ಣ ಸಿಬ್ಬಂದಿಯ ರಚನೆಗೂ ಅಡಿಪಾಯವಾಗಿದೆ.

### ***ಅರ್ಥ ಮತ್ತು ವ್ಯಾಖ್ಯೆ*** *(Meaning & Definition)*

ನಾಗರಿಕ ಸೇವೆಯಲ್ಲಿನ ಖಾಲಿ ಹುದ್ದೆಗಳನ್ನು ಭರ್ತಿ ಮಾಡುವುದೇ ನೇಮಕಾತಿಯಾಗಿರುತ್ತದೆ.

1) ಎಲ್. ಡಿ. ವೈಟ್‌ರವರ ಪ್ರಕಾರ: ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಯೋಗ್ಯ ಅಭ್ಯರ್ಥಿಗಳನ್ನು ಆಕರ್ಷಿಸುವುದೇ ನೇಮಕಾತಿಯಾಗಿದೆ.

2) ಜೆ. ಡಿ. ಕಂಗ್ಸಲಿಯವರ ಪ್ರಕಾರ: ಸಾರ್ವಜನಿಕ ನೇಮಕಾತಿಯಲ್ಲಿ ಯೋಗ್ಯ ಅಭ್ಯರ್ಥಿಗಳು ಸ್ಪರ್ದಿಸುವಂತೆ ಪ್ರೇರೇಪಿಸುವುದೇ ನೇಮಕಾತಿ

3) ಡಿ. ವಾಲ್ಡೊರವರ ಪ್ರಕಾರ: ಸಾರ್ವಜನಿಕ ಸೇವೆಗಳ ನೇಮಕಾತಿಯಲ್ಲಿ ಸ್ಪರ್ದಿಸುವಂತೆ ಯೋಗ್ಯ ಅಭ್ಯರ್ಥಿಗಳನ್ನು ಆಕರ್ಷಿಸುವುದೇ ಆಗಿರುತ್ತದೆ.

ಅರ್ಹ ಅಭ್ಯರ್ಥಿಗಳನ್ನು ಸಾರ್ವಜನಿಕ ಹುದ್ದೆಗಳಿಗೆ ಆಕರ್ಷಿಸಲು ಜಾಹಿರಾತು ಪ್ರಕಟಿಸಿ ನೇಮಕಾತಿ ಮಾಡುವವರೆಗಿನ ಎಲ್ಲಾ ಚಟುವಟಿಕೆಗಳನ್ನು ನೇಮಕಾತಿಯು ಒಳಗೊಂಡಿರುತ್ತದೆ.

### ಪ್ರಾಮುಖ್ಯತೆ

ನಾಗರಿಕ ಸೇವೆಗಳಲ್ಲಿ ದಕ್ಷತೆ, ಸ್ಥಾನ ಮತ್ತು ಸಮಯೋಚಿತ ಉಪಯುಕ್ತತೆಗೆ ನೇಮಕಾತಿ ಅಗತ್ಯವಾಗಿರುತ್ತದೆ. ಆಡಳಿತ ಯಂತ್ರದ ಉಪಯುಕ್ತತೆ ನಾಗರಿಕ ಸೇವಾ ಸಿಬ್ಬಂದಿಯ ದಕ್ಷತೆಯನ್ನು ಅವಲಂಬಿಸಿದೆ. ನಾಗರಿಕ ಸೇವಾ ಸಿಬ್ಬಂದಿಯ ದಕ್ಷತೆ ನೇಮಕಾತಿ ಪದ್ಧತಿಯನ್ನು ಅವಲಂಬಿಸಿದೆ. ಔ. ಜಿ. ಸ್ಟಾಲ್‌ರವರ ಪ್ರಕಾರ ನೇಮಕ ಪದ್ಧತಿಯು ಸಂಪೂರ್ಣ ಸಾರ್ವಜನಿಕ ಸಿಬ್ಬಂದಿಯ ರಚನೆಯ ಅಡಿಗಲ್ಲಾಗಿರುತ್ತದೆ. ನೇಮಕ ವಿಧಾನವೂ ಹೆಚ್ಚು ಸಮರ್ಪಕವೂ, ವೈಜ್ಞಾನಿಕವೂ ಆಗಿದ್ದಾಗ ದಕ್ಷ ಸಿಬ್ಬಂದಿ ವರ್ಗವನ್ನು ಹೊಂದಿ ಆಡಳಿತ ವ್ಯವಸ್ಥೆಯನ್ನು ಹೆಚ್ಚು ಯಶಸ್ವಿಯಾಗಿ ನಡೆಸಲು ಸಾಧ್ಯವಾಗುತ್ತದೆ.

ಖಾಲಿ ಇರುವ ಹುದ್ದೆಗಳಿಗೆ ಜಾಹಿರಾತುಗಳನ್ನು ಪ್ರಕಟಿಸುವುದರಿಂದ ಹಿಡಿದು ಹುದ್ದೆಗೆ ಅಭ್ಯರ್ಥಿಗಳನ್ನು ನೇಮಕ ಮಾಡುವವರೆಗಿನ ಎಲ್ಲಾ ಪ್ರಕ್ರಿಯೆಗಳನ್ನು ನೇಮಕಾತಿ

ಒಳಗೊಂಡಿರುತ್ತದೆ. ಪ್ರಸ್ತುತ ಸಾರ್ವಜನಿಕ ಸೇವೆಯ ತಾಂತ್ರಿಕ ಸ್ವರೂಪ ಹೆಚ್ಚಳವಾಗಿರುವುದರಿಂದ ಮತ್ತು ಪ್ರಜಾಸತ್ತಾತ್ಮಕ ವಿಚಾರಗಳು ಹಾಗೂ ಸಂಸ್ಥೆಗಳ ಬೆಳವಣಿಗೆಗಳಿಂದಲೂ ನೇಮಕಾತಿ ಹೆಚ್ಚು ಪ್ರಾಮುಖ್ಯತೆಯನ್ನು ಹೊಂದಿದೆ.

ನಾಗರಿಕ ಸೇವಾ ಸಿಬ್ಬಂದಿಯ ದಕ್ಷತೆಯು ಅದರ ನೇಮಕ ಪದ್ಧತಿಯನ್ನು ಅವಲಂಬಿಸಿದೆ. ದೋಷ ಯುಕ್ತವಾದ ನೇಮಕಾತಿ ಆಡಳಿತ ವ್ಯವಸ್ಥೆಯನ್ನು ಶಾಶ್ವತವಾಗಿ ದುರ್ಬಲಗೊಳಿಸಿ ಅದರಲ್ಲಿ ಆಯೋಗ್ಯರಿಗೆ ಅವಕಾಶ ಕೊಡುತ್ತದೆ. ಆದುದರಿಂದ ನೇಮಕ ವಿಧಾನವು ಹೆಚ್ಚು ಸಮರ್ಪಕವೂ ವೈಜ್ಞಾನಿಕವೂ ಆಗಿದ್ದಾಗ ದಕ್ಷ ಸಿಬ್ಬಂದಿ ವರ್ಗವನ್ನು ಹೊಂದಿ ಸಾರ್ವಜನಿಕ ಆಡಳಿತವನ್ನು ಹೆಚ್ಚು ಯಶಸ್ವಿಯಾಗಿ ನಡೆಸಲು ಸಾಧ್ಯವಾಗುತ್ತದೆ.

### *ನೇಮಕಾತಿಯ ವಿಧಾನಗಳು:*

1) ನೇರ ಅಥವಾ ಬಾಹ್ಯ ನೇಮಕಾತಿ:

ಅಗತ್ಯ ಸ್ಥಾನಗಳಿಗೆ ಅರ್ಹ ಅಭ್ಯರ್ಥಿಗಳನ್ನು ಮುಕ್ತ ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನಿಶ್ಚಿತ ರೀತಿಯಲ್ಲಿ ಆಯ್ಕೆಮಾಡುವುದೇ ನೇರ ನೇಮಕಾತಿಯಾಗಿರುತ್ತದೆ.

ಗುಣಗಳು

1. ನಿರ್ದಿಷ್ಟ ಅರ್ಹತೆ ಪಡೆದಿರುವ ಎಲ್ಲರಿಗೂ ಸಾರ್ವಜನಿಕ ಸೇವೆಗೆ ಸೇರಲು ಸಮಾನ ಅವಕಾಶ ಕಲ್ಪಿಸುತ್ತದೆ.
2. ಆಯ್ಕೆ ಕ್ಷೇತ್ರ ವಿಶಾಲವಾಗಿರುವುದರಿಂದ ಯೋಗ್ಯ ಮತ್ತು ಸಮರ್ಥ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಸಹಾಯಕವಾಗಿದೆ.
3. ಯುವಕರು ಸೇವೆಗೆ ಸೇರುವುದರಿಂದ ಆಡಳಿತದಲ್ಲಿಯ ಜಡತ್ವ ತೊಲಗಿ ಕ್ರಿಯಾಶೀಲತೆ ಮತ್ತು ನವೀನ ವಿಚಾರಗಳು ಬರುತ್ತದೆ.
4. ತಾಂತ್ರಿಕ ಮತ್ತು ವೃತ್ತಿ ಸೇವೆಗಳಿಗೆ ಅತ್ಯಾಧುನಿಕ ತಂತ್ರಜ್ಞಾನ ಹೊಂದಿರುವ ಯುವಪೀಳಿಗೆಯನ್ನು ಈ ವಿಧಾನದ ಮೂಲಕ ಆಯ್ಕೆ ಮಾಡಲು ಸಹಾಯಕವಾಗುತ್ತದೆ.

ನ್ಯೂನ್ಯತೆಗಳು

1. ಅನುಭವವಿಲ್ಲದವರನ್ನು ಸೇವೆಗೆ ಸೇರಿಸಿಕೊಳ್ಳುವುದರಿಂದ ಅವರಿಗೆ ತರಬೇತಿ ನೀಡಲು ಹೆಚ್ಚು ವೆಚ್ಚವಾಗುತ್ತದೆ.
2. ಸೇವೆ ಸಲ್ಲಿಸುತ್ತಿರುವವರ ಉತ್ಸಾಹವನ್ನು ಕುಗ್ಗಿಸುತ್ತದೆ.
3. ಹಿರಿಯರ ಮೇಲೆ ಕಿರಿಯರು ಬರುವುದು ಅಸೂಯೆಗೆ ಅವಕಾಶ ನೀಡುತ್ತದೆ.
4. ಪರೀಕ್ಷೆಯಲ್ಲಿ ಹೆಚ್ಚು ಅಂಕ ಗಳಿಸಿದವರು ಸಮರ್ಥರೆಂದು ಪರಿಗಣಿಸಲು ಸಾಧ್ಯವಾಗುವುದಿಲ್ಲ.

ಆಂತರಿಕ (ಬಡ್ತಿ) ನೇಮಕಾತಿ:

ಈಗಾಗಲೇ ಸರಕಾರಿ ಸೇವೆಯಲ್ಲಿರುವ ಸೂಕ್ತ ಮತ್ತು ಅನುಭವ ಹೊಂದಿರುವ ಅಭ್ಯರ್ಥಿಗಳನ್ನು ಖಾಲಿ ಹುದ್ದೆಗಳಿಗೆ ಅರ್ಹತೆ ಮತ್ತು ಜೇಷ್ಠತೆಯ ಆಧಾರದ ಮೇಲೆ ನೇಮಕ ಮಾಡುವುದನ್ನು ಆಂತರಿಕ ನೇಮಕಾತಿ ಪದೋನ್ನತಿ ಅಥವಾ ಬಡ್ತಿ ಎಂದು ಕರೆಯಲಾಗುತ್ತದೆ.

ಗುಣಗಳು:

1. ನೌಕರರು ಅನುಭವಿಗಳಾಗಿರುವುದರಿಂದ ಯಾವುದೇ ತರಬೇತಿ ಇಲ್ಲದೆ ದಕ್ಷತೆಯಿಂದ ಕಾರ್ಯನಿರ್ವಹಿಸುತ್ತಾರೆ.
2. ಬಡ್ತಿ ಪಡೆದ ನೌಕರರು ಮಾನಸಿಕವಾಗಿ ತೃಪ್ತಿ ಹೊಂದಿ ಆತ್ಮಸ್ಥೈರ್ಯ ಹೆಚ್ಚುತ್ತದೆ.
3. ಬಡ್ತಿ ಇರುವುದರಿಂದ ಖಾಸಗಿ ವಲಯಕ್ಕೆ ಪ್ರತಿಭಾ ಪಲಾಯನ ಆಗುವುದನ್ನು ತಡೆ ಹಿಡಿಯಬಹುದಾಗಿದೆ.

*ನ್ಯೂನ್ಯತೆಗಳು:*

1. ಆಯ್ಕೆ ಕ್ಷೇತ್ರ ಸೀಮಿತವಾಗಿರುತ್ತದೆ. ಇದರಿಂದ ಪ್ರತಿಭಾವಂತರು ಸೇವೆಗೆ ದೊರಕುವುದು ಕಷ್ಟವಾಗುತ್ತದೆ.
2. ಹಳೆಯ ಪದ್ಧತಿಗಳೇ ಮುಂದುವರಿಯುವುದರಿಂದ ಜಡತ್ವ ಕಂಡು ಬರುತ್ತದೆ.
3. ಹುದ್ದೆಗೆ ಸೇರಲು ಎಲ್ಲರಿಗೂ ಅವಕಾಶವಿಲ್ಲದಿರುವುದರಿಂದ ಸಮಾನತೆ ತತ್ವಕ್ಕೆ ವಿರುದ್ಧವಾಗಿದೆ.

ರಾಷ್ಟ್ರವೊಂದರ ನಿಜವಾದ ಮಾನವ ಸಂಪನ್ಮೂಲ ಮತ್ತು ಮತ್ತಿತರ ಸಂಪನ್ಮೂಲಗಳ ವೈಜ್ಞಾನಿಕ ಮತ್ತು ಸಮಯೋಚಿತ ಬಳಕೆ ಮಾನವ ಸಂಪನ್ಮೂಲ ಅಭಿವೃದ್ಧಿ ಮತ್ತು ನಿರ್ವಹಣೆಯನ್ನು ಅವಲಂಬಿಸಿದೆ. ಆಧುನಿಕ ವಿಜ್ಞಾನ, ತಂತ್ರಜ್ಞಾನ ಮತ್ತು ಸಾರ್ವಜನಿಕ ನೀತಿಗಳಲ್ಲಾದ ಬದಲಾವಣೆಯಿಂದಾಗಿ ದೈಹಿಕವಾಗಿ, ಐಂದ್ರೀಯವಾಗಿ, ಹಾಗೂ ಮಾನಸಿಕವಾಗಿ ನ್ಯೂನತೆ ಹೊಂದಿದ ವ್ಯಕ್ತಿಗಳು ಸಹ ಮಾನವ ಸಂಪನ್ಮೂಲಗಳಿಂದ ಸಾಮರ್ಥ್ಯ ಭರಿತರಾಗುತ್ತಿದ್ದಾರೆ. ಅವರ ತನುಮನದ ವಿಕಲತೆಗಿಂತಲೂ ಅವರಲ್ಲಿರುವ ಸುಪ್ತ ಪ್ರತಿಭೆ ಮತ್ತು ಸಮಾಜೋಪಯೋಗಿ ಸಾಮರ್ಥ್ಯಕ್ಕೆ ಕ್ರಮೇಣವಾಗಿ ಮನ್ನಣೆ ದೊರೆಯುತ್ತದೆ. ಸಕಲಾಂಗರಂತೆ ಇವರು ಸಹ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ ಉನ್ನತ ಹುದ್ದೆಗಳನ್ನು ಅಲಂಕರಿಸಿ ಮಾದರಿಯಾಗಿದ್ದಾರೆ. ಹೀಗೆ ಅಂಗ ವಿಶಾಸ್ಗಿರನ್ನೊಳಗೊಂಡು ಸರ್ವರ ಸುಖಮಯ ಜೀವನದ ಕನಸು ಕನವರಿಕೆಗಳೆಲ್ಲ ನನಸಾಗಲು ಬಲಾಢ್ಯ ರಾಜ್ಯ ನಿರ್ಮಾಣವಾಗಲು, ಸರ್ವಕಾಲಿಕವಾಗಿ, ಸರ್ವರ ಭದ್ರತೆ, ಸಮೃದ್ಧತೆ, ಮತ್ತು ಶಾಂತಿಯುತ ಸಹಬಾಳ್ವೆ ಸಾಧ್ಯವಾಗಲು ಸಮರ್ಥ ನಾಗರಿಕ ಸೇವಾ ವರ್ಗ ಅಗತ್ಯವಾಗಿದೆ. ಸಮರ್ಪಕ

ನೇಮಕಾತಿ ಪದ್ಧತಿಯೇ ನಾಗರಿಕ ಸೇವಾ ವರ್ಗಕ್ಕೆ ಬೇಕಾದ ಸಮರ್ಥ್ ಸಿಬ್ಬಂದಿಗಳನ್ನು ಪಡೆಯಲು ಸುವರ್ಣಾವಕಾಶಗಳ ಹೆಬ್ಬಾಗಿಲಾಗಿದೆ.

## ಅಭ್ಯಾಸ

**I.** ಒಂದು ವಾಕ್ಯದಲ್ಲಿ ಉತ್ತರಿಸಿ:

1. ನಾಗರಿಕ ಸೇವೆ ಎಂದರೇನು?
2. ನಾಗರಿಕ ಸೇವಾ ವರ್ಗ ಎಂದರೇನು?
3. ಸರ್ಕಾರದ ನಾಲ್ಕನೇ ಅಂಗ ಯಾವುದು?
4. ಸಾರ್ವಜನಿಕ ಜವಬ್ದಾರಿ ಎಂದರೇನು?
5. ನೇಮಕಾತಿ ಎಂದರೇನು?
6. ಬಡ್ತಿ ಅಥವಾ ಪದೋನ್ನತಿಯ ಅರ್ಥ ತಿಳಿಸಿ.
7. ಕಾರ್ಯಾಂಗದ ಎರಡು ಮುಖಗಳನ್ನು ತಿಳಿಸಿ.
8. ಸ್ಪರ್ಧಾತ್ಮಕ ಪರೀಕ್ಷೆಯ ಅರ್ಥವನ್ನು ತಿಳಿಸಿ.

**II.** ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ:

1. ನಾಗರಿಕ ಸೇವಾ ವರ್ಗದ ವ್ಯಾಖ್ಯೆಯನ್ನು ತಿಳಿಸಿ.
2. ನಾಗರಿಕ ಸೇವಾ ವರ್ಗವನ್ನು ಶಾಶ್ವತ ಕಾರ್ಯಾಂಗವೆಂದು ಕರೆಯಲು ಕಾರಣವೇನು?
3. ರಾಜಕೀಯ ಕಾರ್ಯಾಂಗವೆಂದರೇನು?
4. ಶ್ರೇಣಿ ಪದ್ಧತಿಯ ಅರ್ಥವನ್ನು ಬರೆಯಿರಿ.
5. ಖಾಯಂ ನೇಮಕಾತಿ ಎಂದರೇನು?

**III.** ಐದು ಅಥವಾ ಆರು ವಾಕ್ಯಗಳಲ್ಲಿ ಉತ್ತರಿಸಿ.

1. ನೇಮಕಾತಿಯ ಅರ್ಥ ಮತ್ತು ವ್ಯಾಖ್ಯೆಗಳನ್ನು ಬರೆಯಿರಿ.
2. ನೇರ ನೇಮಕಾತಿಯ ಗುಣಗಳನ್ನು ಬರೆಯಿರಿ.
3. ಆಂತರಿಕ ನೇಮಕಾತಿ ಅಥವಾ ಬಡ್ತಿಯ ನ್ಯೂನತೆಗಳನ್ನು ತಿಳಿಸಿ.
4. ರಾಜಕೀಯ ತಾಟಸ್ಥತೆಯ ಮಹತ್ವವನ್ನು ತಿಳಿಸಿ.
5. ನಾಗರೀಕ ಸೇವಾ ವರ್ಗವನ್ನು ಸರ್ಕಾರದ ನಿರ್ವಾಹಣಾಂಗವೆಂದು ಕರೆಯಲು ಕಾರಣವೇನು?
6. ಅಶಾಶ್ವತ ಕಾರ್ಯಾಂಗ ಮತ್ತು ಶಾಶ್ವತಕಾರ್ಯಾಂಗದ ನಡುವಿನ ವ್ಯತ್ಯಾಸ ತಿಳಿಸಿ.

**IV.** ಎಂಟು ಅಥವಾ ಹತ್ತು ವಾಕ್ಯಗಳಲ್ಲಿ ಉತ್ತರಿಸಿ.

1. ನಾಗರೀಕ ಸೇವಾ ವರ್ಗದ ಲಕ್ಷಣಗಳನ್ನು ವಿವರಿಸಿ.
2. ನಾಗರೀಕ ಸೇವಾ ವರ್ಗದ ಪ್ರಾಮುಖ್ಯತೆಯನ್ನು ತಿಳಿಸಿ.

3. ನೇಮಕಾತಿಯ ಪ್ರಾಮುಖ್ಯತೆಯನ್ನು ಬರೆಯಿರಿ.

**ಸಲಹಾತ್ಮಕ ಚಟುವಟಿಕೆಗಳು**

1. **ಅಖಿಲ ಭಾರತ ಸೇವೆಗಳು, ಕೇಂದ್ರಿಯ ಸೇವೆಗಳು ಮತ್ತು ರಾಜ್ಯ ಸೇವೆಗಳನ್ನು ಪಟ್ಟಿಮಾಡಿ.**
2. **ನೇಮಕಾತಿ ಪ್ರಕ್ರಿಯೆಯ ಕುರಿತು ಶಿಕ್ಷಕರ ಜೊತೆ ಚರ್ಚಿಸಿ.**
3. **ಸ್ಪರ್ಧಾತ್ಮಕ ಪರೀಕ್ಷೆಯ ಕುರಿತು ಮಾಹಿತಿ ಸಂಗ್ರಹಿಸಿ ಪ್ರಬಂಧ ಬರೆಯಿರಿ.**